CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೦೪ (ಭಾದ್ರಪದ ೪, ಶಕ ವರ್ಷ ೧೯೨೬) | ಸಂಚಿಕೆ ೩೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,**
**ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ: ಡಿಬಿಸಿಎಂ:ನ:ಕಾತಭ:ಸಿಆರ್-9:2004-05 ದಿನಾಂಕ: 17ನೇ ಜುಲೈ 2004**

**ವಿಷಯ :** 2004-05ನೇ ಸಾಲಿಗೆ ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ಭತ್ಯೆ ನೀಡುವ ಬಗ್ಗೆ.

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ: ಸಕಇ 205: ಬಿಎಂಎಸ್: 99 ಬೆಂಗಳೂರು, ದಿನಾಂಕ: 7.10.99.

ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್‌ರು, ಸಿಖ್ಖರು, ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ನ್ಯಾಯಾಂಗ ಸೇವೆಯಲ್ಲಿ ತರಬೇತಿ ಪಡೆಯಲು ಈ ಕೆಳಕಂಡ ನಿಬಂಧನೆಗೊಳಪಟ್ಟಂತೆ ಅರ್ಜಿಗಳನ್ನು 2004-2005ನೇ ಸಾಲಿಗೆ ಆಹ್ವಾನಿಸಲಾಗಿದೆ. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆದು ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: 5.8.2004 ರೊಳಗೆ ಈ ಕಛೇರಿಗೆ ಸಲ್ಲಿಸುವುದು.

**ನಿಬಂಧನೆಗಳು:**

1. ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಗೆ ಸಂಬಂಧಿಸಿದಂತೆ, ಅಲ್ಪಸಂಖ್ಯಾತರ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರಾಗಿರುತ್ತಾರೆ.
2. ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದವರಾಗಿರಬೇಕು.
3. ಅಭ್ಯರ್ಥಿಯ ವಾರ್ಷಿಕ ಆದಾಯವು ರೂ. 15000ಕ್ಕೆ ಮೀರಿರಬಾರದು. ಪ್ರವರ್ಗ-1 ರಡಿ ಬರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.
4. ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ: 2 ಒಬ್ಬ ಅಭ್ಯರ್ಥಿಯನ್ನು ಮುಸ್ಲಿಂ ಹಾಗೂ ಇನ್ನೊಬ್ಬ ಅಭ್ಯರ್ಥಿಯನ್ನು ಇತರೆ ಅಲ್ಪಸಂಖ್ಯಾತರ ಸಮುದಾಯಗಳಿಂದ ಆಯ್ಕೆ ಮಾಡಲಾಗುವುದು.
5. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.
6. ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳ ವಯೋಮಿತಿ ಯಲ್ಲಿರಬೇಕು.
7. ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷದೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

8. ಅರ್ಜಿಯ ಜೊತೆಯಲ್ಲಿ ಅವಶ್ಯ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಅಂಕಪಟ್ಟಿಗಳ ದೃಢೀಕರಣ ಪ್ರತಿ, ಜನ್ಮ ದಿನಾಂಕ ದೃಢೀಕರಿಸಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಮತ್ತು ವರ್ಗಾವಣೆ ಪ್ರಮಾಣ ಪತ್ರ ದೃಢೀಕರಣ ಪ್ರತಿಗಳನ್ನು ದೃಢೀಕರಿಸಿ ಸಲ್ಲಿಸಬೇಕು.
9. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಭತ್ಯೆ ನೀಡಲಾಗುವುದು ಮತ್ತು ಮಾಹೆಯಾನ ರೂ. 1000ಗಳ ತರಬೇತಿ ಭತ್ಯೆ ನೀಡಲಾಗುವುದು.
10. ಅಭ್ಯರ್ಥಿಯು ತರಬೇತಿಯನ್ನು ಮಧ್ಯದಲ್ಲಿ ಬಿಡುವಂತಿಲ್ಲ. ಈ ಬಗ್ಗೆ ಒಂದು ಮುಚ್ಚಳಿಕೆ ಪತ್ರ ನೀಡಬೇಕು. ಒಂದು ವೇಳೆ ಸರ್ಕಾರಿ ಉದ್ಯೋಗ ದೊರಕಿದಲ್ಲಿ ಅಥವಾ ನ್ಯಾಯಾಧಿಕಾರಿಯಾಗಿ ನೇಮಕಾತಿ ಹೊಂದಿದಲ್ಲಿ ಜಿಲ್ಲಾ ಸಮಿತಿಯ ಗಮನಕ್ಕೆ ತಂದು ತರಬೇತಿ ಬಿಡಬಹುದು. ವಿಶೇಷ ಸಂದರ್ಭದಲ್ಲಿ ತರಬೇತಿ ಬಿಡಬೇಕಾದಲ್ಲಿ ಸರ್ಕಾರದ ಅನುಮತಿ ಪಡೆಯಬೇಕು.
11. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.
12. ಹೆಚ್ಚಿನ ಮಾಹಿತಿಗಾಗಿ ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ ಗೋಪುರ, ಅಂಬೇಡ್ಕರ್ ವೀದಿ, ಬೆಂಗಳೂರು-1, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯತಕ್ಕದ್ದು.

ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮತ್ತು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರಿಗೆ ಸಲ್ಲಿಸುವುದು. ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಜಿಲ್ಲಾ ಅಧಿಕಾರಿಗಳು,
ಪಿ.ಆರ್. 1100 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,**
**ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್:136/04 ದಿನಾಂಕ: 25ನೇ ಜೂನ್ 2004**

| **ಅರ್ಜಿದಾರರು :** | **ವಿರುದ್ಧ** | **ಪ್ರತಿವಾದಿಗಳು :** |
|---|---|---|
| 1. ಸುಭಾನಾಭೀ @ ಸುಭಾನಕ್ಕ ಮಹಮದ್ ಸಾಬ್‌ರವರ ಪತ್ನಿ 55 ವರ್ಷ | | 1. ಜೆ. ಸಿ. ಓಬಣ್ಣ ಬಿನ್ ಡಿ. ಆರ್. ಚಿತ್ತಪ್ಪ ಹಳೇತಾಲ್ಲೂಕ್ ಆಫೀಸ್ ರಸ್ತೆ, ನಾಯಕರ ಕಾಲೋನಿ, ಜಗಳೂರು. |
| 2. ಹಸೀನಾಬೇಗಂ @ ಹಸೀನಾ ಮಹಮದ್‌ಸಾಬ್‌ರವರ ಮಗಳು 19 ವರ್ಷ ಜೆ.ಎಂ.ಎಂ. ಮೆಮೋರಿಯಲ್ ಸ್ಕೂಲ್ ಕಾಂಪೌಂಡ್, ಬೆಂಗಳೂರು | | 2. ಮ್ಯಾನೇಜರ್, ಓರಿಯೆಂಟಲ್ ಇನ್ಸೂರೆನ್ಸ್ ಕಂ.ಲಿ ಪಿ.ಬಿ. ರಸ್ತೆ, ದಾವಣಗೆರೆ |

**ಪ್ರಕಟಣೆ**

ಶ್ರೀಮತಿ ಸುಭಾನಾಭೀ ಹಾಗೂ ಹಸೀನಾಬೇಗಂ ಇವರುಗಳಾದ ತಾವು ಮೃತ ಅಸ್ಲಾಂ ಇವರ ತಾಯಿ ಮತ್ತು ತಂಗಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಅಸ್ಲಾಂ ರವರು ಒಂದನೇ ಪ್ರತಿವಾದಿಗಳಾದ ಜೆ.ಸಿ. ಓಬಣ್ಣ ಇವರ ಟಾಟಾಸುಮೋರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**
ಪಿ.ಆರ್. 1101 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್:148/04 ದಿನಾಂಕ: 5ನೇ ಜುಲೈ 2004**

| **ಅರ್ಜಿದಾರರು :** | **ವಿರುದ್ಧ** | **ಪ್ರತಿವಾದಿಗಳು :** |
|---|---|---|
| 1. ರೇಷ್ಮಾಭಾನು ದಿ: ಸೈಯದ್ ಶಬ್ಬೀರ್‌ರವರ ಪತ್ನಿ 20 ವರ್ಷ | | 1. ಮಹಮದ್ ಕಲೀಮುಲ್ಲಾ ಬಿನ್ ಮಹಮದ್ ಶಬ್ಬೀರ್ ಪಿಡಬ್ಲ್ಯೂಡಿ ಮುಖ್ಯರಸ್ತೆ, ಚನ್ನಗಿರಿ, ದಾವಣಗೆರೆ ಜಿಲ್ಲೆ |
| 2. ರಹಮತುನ್ನಿಸ್ಸಾ, ಕೋಂ ದಿ: ಸೈಯದ್ ಮೆಹಬೂಬ್ 60 ವರ್ಷ, ಸೈಯಿದಾಮೊಹಲ್ಲಾ, ಚನ್ನಗಿರಿ, ದಾವಣಗೆರೆ ಜಿಲ್ಲೆ. | | 2. ಪಿ. ಭೀಮಪ್ಪ ಬಿನ್ ಓಬಯ್ಯ ಮೆ: ಮಹಾಲಕ್ಷ್ಮಿ ಟ್ರಾನ್ಸ್ ಪೋರ್ಟ್, ನಾಯಕರಬೀಧಿ ಪಾವಗಡರಸ್ತೆ, ಚಳ್ಳಕೆರೆ, |
| | | 3. ಬ್ರ್ಯಾಂಚ್ ಮ್ಯಾನೇಜರ್ ಓರಿಯೆಂಟಲ್ ಇನ್ಸೂರೆನ್ಸ್ ಕಂ ಲಿ., ಕೆಎಸ್‌ಆರ್‌ಟಿಸಿ ಬಸ್‌ಸ್ಟ್ಯಾಂಡ್ ಎದುರು, ಚಿತ್ರದುರ್ಗ |

**ಪ್ರಕಟಣೆ**

ಶ್ರೀಮತಿ 1) ರೇಷ್ಮಾಭಾನು 2) ರೆಹಮತುನ್ನಿಸ್ಸಾ ಇವರುಗಳಾದ ತಾವು ಮೃತ ಸೈಯದ್ ಶಬ್ಬೀರ್ ಇವರ ಪತ್ನಿ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಸೈಯದ್‌ಶಬ್ಬೀರ್ ರವರು ಒಂದನೇ ಪ್ರತಿವಾದಿಗಳಾದ ಮೆಹಮದ್ ಕಲೀಮುಲ್ಲಾ ಇವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**

ಪಿ.ಆರ್. 1102

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್:161/04 ದಿನಾಂಕ: 13ನೇ ಜುಲೈ 2004**

**ಅರ್ಜಿದಾರರು :**

1. ತಿಪ್ಪಮ್ಮ ಕೋಂ ದಿ: ಗೋಪಾಲ 20 ವರ್ಷಗಳು
2. ಜಿ. ಭವಾನಿ ದಿ: ಗೋಪಾಲರವರ ಮಗಳು 3 ವರ್ಷಗಳು
3. ಜಿ. ಗೋಪಾಲ ಬಿನ್ ದಿ: ಗೋಪಾಲ 4 ತಿಂಗಳು ಕಲ್ಲಪ್ಪನಹಳ್ಳಿ, ದಾವಣಗೆರೆ ತಾಲ್ಲೂಕ್

**ವಿರುದ್ಧ**

**ಪ್ರತಿವಾದಿಗಳು :**

1. ಉಮಾಪತಿ ಬಿನ್ ಎಂ. ಪರಮೇಶ್ವರಪ್ಪ ಜಯಲಕ್ಷ್ಮೀ ಬೋರ್‌ವೆಲ್ಸ್ ಮಾಲೀಕರು, ತೇರುಬೀದಿ, ನಾಯಕನಹಟ್ಟಿ, ಚಳ್ಳಕೆರೆ ತಾಲ್ಲೂಕ್
2. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ ಲಿ., ಚಾಮರಾಜಪೇಟೆ, ದಾವಣಗೆರೆ.

**ಪ್ರಕಟಣೆ**

ಶ್ರೀ: ಶ್ರೀಮತಿ 1) ತಿಪ್ಪಮ್ಮ 2) ಜಿ. ಭವಾನಿ 3) ಜಿ. ಗೋಪಾಲ ಇವರುಗಳಾದ ತಾವು ಮೃತ ಗೋಪಾಲ ಇವರ ಪತ್ನಿ ಮತ್ತು ಮಗಳು ಹಾಗೂ ಮಗ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗೋಪಾಲ ರವರು ಒಂದನೇ ಪ್ರತಿವಾದಿಗಳಾದ ಉಮಾಪತಿ ಇವರ ಲಾರಿಯಲ್ಲಿ ಹೆಲ್ಪರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**

ಪಿ.ಆರ್. 1103

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್:154/04 ದಿನಾಂಕ: 9ನೇ ಜುಲೈ 2004**

**ಅರ್ಜಿದಾರರು :**

1. ಕರಿಬಸಮ್ಮ ಕೋಂ ದಿ: ಕುಬೇಂದ್ರಪ್ಪ 40 ವರ್ಷಗಳು
2. ಕೆ. ನಾಗರಾಜ್ ಬಿನ್ ದಿ: ಕುಬೇಂದ್ರಪ್ಪ 19 ವರ್ಷಗಳು
3. ಹೊನ್ನೂರಮ್ಮ ಕೋಂ ದಿ: ನಾಗಪ್ಪ 65 ವರ್ಷಗಳು ನಾಯಕನಹಟ್ಟಿ, ದುರ್ಗಮ್ಮನ ದೇವಸ್ಥಾನದ ಎದುರು, ನಾಗನೂರು, ದಾವಣಗೆರೆ ತಾ:

**ವಿರುದ್ಧ**

**ಪ್ರತಿವಾದಿಗಳು :**

1. ಬಿ. ಕೆ. ಹನುಮಂತರಾಜು ಟ್ರಕ್ ನಂ. ಕೆಎ 17.8622ರ ಮಾಲೀಕರು ರಾಮಾಲಯರಸ್ತೆ, ಜಗಳೂರು, ದಾವಣಗೆರೆ ಜಿಲ್ಲೆ.
2. ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ ಲಿ., ತಾಲ್ಲೂಕ್ ಆಫೀಸ್ ಸಮೀಪ, ಚಿತ್ರದುರ್ಗ

**ಪ್ರಕಟಣೆ**

ಶ್ರೀ: ಶ್ರೀಮತಿ ಕರಿಬಸಮ್ಮ, ಕೆ. ನಾಗರಾಜ್ ಮತ್ತು ಹೊನ್ನೂರಮ್ಮ ಇವರುಗಳಾದ ತಾವು ಮೃತ ಕುಬೇಂದ್ರಪ್ಪ ಇವರ ಪತ್ನಿ, ಮಗ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕುಬೇಂದ್ರಪ್ಪ ರವರು ಒಂದನೇ ಪ್ರತಿವಾದಿಗಳಾದ ಬಿ. ಕೆ. ಹನುಮಂತರಾಜು ಇವರ ಟ್ರಕ್ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1104

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು**

**ಗದಗ ಜಿಲ್ಲೆ, ಗದಗ, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ:ಕಾನಪ:19/04:303 ದಿನಾಂಕ: 19ನೇ ಜುಲೈ 2004**

**ಅರ್ಜಿದಾರರು :**

1. ಸುಧಾನಪ್ಪ ಗಣೇಶಪ್ಪ ಹುಡೇದ್
2. ಶ್ರೀಮತಿ ಗುರುಶಾಂತವ್ವ ಕೋಂ ಸುಧಾನಪ್ಪ ಹುಡೇದ್ ಅಡವಿ ಸೋಮಾಪುರ, ಗದಗ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು :**

1. ಅನಿಲ್‌ಕುಮಾರ್ S/o ಕೇಶವರಾವ್ ದೇಶಪಾಂಡೆ ಕಿಲ್ಲ; ರಾಮೇಶ್ವರ ದೇವಸ್ಥಾನ ಹತ್ತಿರ ಬಿಳಗಿ, ಬಾಗಲಕೋಟೆ ಜಿಲ್ಲೆ,
2. ಡಿವಿಜನಲ್ ಮೇನೇಜರ್, ನ್ಯಾಷನಲ್ ಇನ್‌ಶೂರೆನ್ಸ್ ಕಂ. ಲಿ., ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಶ್ರೀಮತಿ: ಸುಧಾನಪ್ಪ ಮತ್ತು ಗುರುಶಾಂತವ್ವ ಇವರು, ತಾವು ಮೃತ ಶಿವವ್ವ ಸುಧಾನಪ್ಪ ಹುಡೇದ್ ಇವರ ಆಶ್ರಿತರೆಂದೂ ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಶಿವಪ್ಪ ಸುಧಾನಪ್ಪ ಹುಡೇದ್ ಇವರು ಒಂದನೇ ಪ್ರತಿವಾದಿಗಳಾದ ಅನಿಲ್ ಕುಮಾರ್ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 1105

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ: ಸಂಖ್ಯೆ: ಜೆಆರ್‌ಬಿ:ಡಿಸ್:7941:2003-04 ದಿನಾಂಕ: 30ನೇ ಜೂನ್ 2004**

**ವಾದಿ :**

1. ಪ್ರಧಾನ ವ್ಯವಸ್ಥಾಪಕರು ಸರ್ ಎಂ. ವಿಶ್ವೇಶ್ವರಯ್ಯ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ, ಶಂಕರಮಠ ರಸ್ತೆ, ಶಂಕರಪುರಂ, ಬೆಂಗಳೂರು-560 004.

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀ ವಿ. ಚಂದ್ರಶೇಖರಾಚಾರಿ ಬಿನ್ ಎನ್. ವೆಂಕಟರಮಣಾಚಾರಿ
2. ಶ್ರೀಮತಿ ವಿ. ವಸಂತ, ಕೋಂ ವಿ. ಚಂದ್ರಶೇಖರಾಚಾರಿ **ವಾಸ:** ನಂ. 5ನೇ ಮುಖ್ಯರಸ್ತೆ, ನಾಗರಬಾವಿ ಮುಖ್ಯರಸ್ತೆ, ಬೆಂಗಳೂರು-560072

**ಪ್ರಸ್ತಾವನೆ:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದಲ್ಲಿ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 17,62,299/- ಗಳನ್ನು ದಿನಾಂಕ: 01.01.2004 ರಿಂದ ಶೇಕಡಾ 18 ರಂತೆ ಬಡ್ಡಿ ಮತ್ತು ಶೇಕಡ 2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

2. ವಾದಿಯವರು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ಈ ನ್ಯಾಯಾಲಯವು ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ದಿನಾಂಕ: 25.02.2004 ರಂದು ಪ್ರತಿವಾದಿಗಳಿಗೆ ನೀಡಿರುವ ನೋಟೀಸಿನಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವಜಪ್ತಿ ಮಾಡಿ ಆದೇಶ ನೀಡಿರುತ್ತದೆ. ಅಲ್ಲದೆ ಪ್ರತಿವಾದಿಗಳು ಈ ನ್ಯಾಯಾಲಯವು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಸದರೀ ಆದೇಶವನ್ನು ಹಿಂದಕ್ಕೆ ಪಡೆಯಬೇಕೆಂದು ಇಚ್ಛಿಸಿದಲ್ಲಿ ರೂ. 17,62,299/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ: 22.03.2004 ರ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿತ್ತು.

ಆದರೆ ವಾದಿಯು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಿನಾಂಕ: 07.05.2004ರ ಪತ್ರದಲ್ಲಿ, ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ: 25.02.2004ರ ಆದೇಶದ ರೀತ್ಯಾ ವಾದಿ ಬ್ಯಾಂಕಿಗೆ ಯಾವುದೇ ಹಣ ಪಾವತಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಮೂಲಕ ಪ್ರತಿವಾದಿಗಳು ಈ ನ್ಯಾಯಾಲಯವು ಮೇಲ್ಕಂಡ ಆದೇಶದಲ್ಲಿ ವಿಧಿಸಿರುವ ಷರತ್ತನ್ನು ಪಾಲಿಸಲು ವಿಫಲರಾಗಿರುತ್ತಾರೆ.

ಆದ್ದರಿಂದ ಈ ನ್ಯಾಯಾಲಯವು ದಿನಾಂಕ: 31.12.2003 ರಂದು ಷರತ್ತಿಗೆ ಒಳಪಟ್ಟು ಹೊರಡಿಸಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ.ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು, ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಈ ನ್ಯಾಯಾಲಯದ ಆದೇಶ ಕ್ರಮಾಂಕ: ಜೆಆರ್‌ಬಿ/ಡಿಐಎಸ್/7941/2003-04 ದಿನಾಂಕ: 25.02.2004 ರನ್ನು ವಾದಿಯ ಈ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ಸ್ಥಿರೀಕರಿಸಿ, ಈ ಮೂಲಕ ಆದೇಶಿಸಿರುತ್ತೇನೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗರಭಾವಿ ಗ್ರಾಮದ ಅಸೆಸ್‌ಮೆಂಟ್ ನಂ. 42, ಖಾತಾ ನಂ. 2964/3333 ಈ ಸಂಖ್ಯೆಯ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಅಳತೆಯ ಆಸ್ತಿ ಸಂಖ್ಯೆ: 5 (ಹಳೇ ನಂ.6) ಇದರಲ್ಲಿ ಕಟ್ಟಲಾಗಿರುವ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚೆಕ್ಕುಬಂದಿ:

ಪೂರ್ವಕ್ಕೆ : ಆಸ್ತಿ ಸಂಖ್ಯೆ 5
ಪಶ್ಚಿಮಕ್ಕೆ : ಆಸ್ತಿ ಸಂಖ್ಯೆ 6
ಉತ್ತರಕ್ಕೆ : ಶ್ರೀ ಲಕ್ಕಪ್ಪನವರಿಗೆ ಸೇರಿದ ಆಸ್ತಿ
ದಕ್ಷಿಣಕ್ಕೆ : ರಸ್ತೆ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 30.06.2004 ರಂದು ನೀಡಿರುತ್ತೇನೆ.

**ಬಸವೇಗೌಡ**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 1106

**IN THE COURT OF COMMISSIONER FOR WORKMEN'S COMPENSATION, BIDAR**
**No. LOB/WCA/CR-30/2004**

**Applicants:** **V/s** **Respondents:**

Applicants:
1. Parwathi Bai W/o Late Sidram Phulari Age. 30 years Occ: Household, R/o Shivni Tq Bhalki Dist Bidar & 2 Others.

Respondents:
1. Nanshi Ajannaram Agarwal Pandanlal Anjar Dist. Kachchin, Gujarat.
2. New India Assurance Co. Ltd., Kachch, through D.M. N.I.A. Co. Ltd., Gulbarga.

**PROCLAMATION**

Sri/Smt Parwathi Bai W/o Late Sidram Phulari R/o Shivni Tq Bhalki Dist Bidar have/has filed application in this court claiming compensation stating that late Sidram Phulari was working as Driver under the Respondent No. R-I he met with an accident arising out of and during the course of employment as a result he died on 7.5.2004

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner for workmen's
Compensation, Bidar.

PR-1107

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು-52, ಇವರ ನಡವಳಿಗಳು**

**ಸಂಖ್ಯೆ: ಆರ್‌ಸಿಎಸ್:ಎಲ್‌ಕ್ಯೂಡಿ:132:1998-99 ದಿನಾಂಕ: 26ನೇ ಜುಲೈ 2004**

**ವಿಷಯ :** ಸಮಾಪನೆಗೊಂಡಿರುವ ತುಮಕೂರು ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಇದರ ಬಗ್ಗೆ.

**ಉಲ್ಲೇಖ :**
1. ಮಾನ್ಯ ಸಹಕಾರ ಸಚಿವರು, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು ಇವರ ಆದೇಶದ ಸಂಖ್ಯೆ ಸಿಎಂಡಬ್ಲ್ಯೂ/19/ಸಿಎಪಿ/2002, ದಿನಾಂಕ: 26.6.2002.
2. ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾದೇಶ ದಿನಾಂಕ: 20.4.1999.
3. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ನಂ. ಅಪೀಲ್ ಆರ್‌ಸಿಎಸ್/ಡಿಎಪಿ/ಡಿ/8/05:99-2000, ದಿನಾಂಕ: 06.10.2001.
4. ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಇವರ ಪತ್ರ ಸಂ: ಡಿಆರ್‌ಟಿ/ಎಲ್‌ಕ್ಯೂಡಿ/259/96-97, ದಿನಾಂಕ: 22.5.2004.

**ಪ್ರಸ್ತಾವನೆ:**

ತುಮಕೂರು ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಈ ಸಂಘವು ಸಂ. ಜೆಆರ್‌ಟಿ/ ಆರ್‌ಜಿಎಸ್/3/10693/86-87, ದಿನಾಂಕ: 25.7.86 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತುಮಕೂರು, ಗುಬ್ಬಿ ಮತ್ತು ಕೊರಟಗೆರೆ ತಾಲ್ಲೂಕುಗಳಿಗೆ ಸೀಮಿತವಾಗಿರುತ್ತದೆ. ಸಂಘವು ಪ್ರಾರಂಭವಾದಾಗಿನಿಂದಲೂ ಕಾರ್ಯನಿರ್ವಹಿಸದೇ ಸ್ಥಗಿತಗೊಂಡು ಮೂಲ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸುವಲ್ಲಿ ವಿಫಲವಾಗಿದ್ದರಿಂದ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರ ಮೇರೆಗೆ ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕಛೇರಿಯ ಆದೇಶ ಕ್ರ.ಸಂ.ಸಮಾಪನೆ/132/98-99, ದಿನಾಂಕ: 20.4.1999 ರನ್ವಯ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ತುಮಕೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಈ ಆದೇಶದ ವಿರುದ್ಧ ಸಂಘವು ಸಹಕಾರ ಸಂಘಗಳ ನಿಬಂಧಕರ ನ್ಯಾಯಾಲಯದಲ್ಲಿ ದಾವಾ ಹೂಡಿದ್ದು, ಅದರ ಪ್ರಕಾರ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ನಂ. ಅಪೀಲ್/ಆರ್‌ಸಿಎಸ್/ಡಿಎಪಿ/ಡಿ/8/05/99-2000, ದಿನಾಂಕ: 6.10.2001ರ ಆದೇಶದಲ್ಲಿ ದಾವೆಯನ್ನು ವಜಾ ಮಾಡಿದ್ದು, ತದನಂತರ ಕಾರ್ಯದರ್ಶಿಯವರು ಮಾನ್ಯ ಸಹಕಾರ ಸಚಿವರು, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಪುನರ್ ಪರಿಶೀಲನಾ ಅರ್ಜಿ ಸಂಖ್ಯೆ: ಸಿಎಂಡಬ್ಲ್ಯೂ/19/ಸಿಎಪಿ/2002, ದಿನಾಂಕ: 26.6.2002 ರಲ್ಲಿ ಪುನಃಶ್ಚೇತನಗೊಳಿಸಿ ಆದೇಶ ಹೊರಡಿಸಲಾಗಿದೆ. ಈ ಸಂಘದ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿರುವುದರಿಂದ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ ಸಂಘದ ಪುನಃಶ್ಚೇತನಗೊಳಿಸಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (4)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಇವರು ಕೋರಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಿದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3) ರನ್ವಯ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಶ್ರೀ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು

ಇತರೆ), ಕೇಂದ್ರ ಕಛೇರಿ ಆದ ನಾನು ಈ ಕಛೇರಿಯ ಆದೇಶ ಸಂ. ಸಮಾಪನೆ/132/98-99, ದಿನಾಂಕ: 20.4.1999 ರನ್ವಯ ತುಮಕೂರು ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಇದನ್ನು ಸಮಾಪನೆ ಮಾಡಿ ಹೊರಡಿಸಲಾಗಿದ್ದ ಆದೇಶವನ್ನು ರದ್ದುಪಡಿಸಲಾಗಿದೆ.

ಸಂಘದ ಪದಾಧಿಕಾರಿಗಳು ಸಂಘದ ನಿಯಮಾವಳಿಗಳ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂಗಳ ರೀತ್ಯಾ ಕಾರ್ಯನಿರ್ವಹಿಸಿ ಸಂಘದ ಸದಸ್ಯರುಗಳ ಏಳಿಗೆಗೆ ಕಾರ್ಯಪ್ರವೃತ್ತರಾಗಲು ಅವಶ್ಯ ಜರೂರು ಕ್ರಮ ಕೈಗೊಳ್ಳಲು ಶ್ರಮಿಸುವಂತೆ ಸಹ ಆದೇಶಿಸಿದೆ.

ಈ ಮೇಲಿನ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 26.7.2004 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

ಪಿ.ಆರ್. 1108

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ,**

**ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018**

**ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ:ಎಂಡಿ:9082:2003-04 ದಿನಾಂಕ: 30ನೇ ಜೂನ್ 2004**

| **ವಾದಿ:** | **ವಿರುದ್ಧ** | **ಪ್ರತಿವಾದಿಗಳು :** |
|---|---|---|
| 1. ಪ್ರಧಾನ ವ್ಯವಸ್ಥಾಪಕರು<br>ಸರ್ ಎಂ. ವಿಶ್ವೇಶ್ವರಯ್ಯ<br>ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ,<br>ನಂ.109, ಶಂಕರಮಠ ರಸ್ತೆ, ಶಂಕರಪುರಂ,<br>ಬೆಂಗಳೂರು-560 004. | | 1. ಶ್ರೀ ಎನ್. ಜಿ. ಉಮೇಶ್, ಮಾಲೀಕರು,<br>ಆಶ್ರಯ ಮೊಸಾಯಿಕ್ ಟೈಲ್ಸ್ ಅಂಡ್ ಕಾಂಕ್ರೀಟ್<br>ಬ್ಲಾಕ್ ಇಂಡಸ್ಟ್ರೀಸ್ (ರಿ), ಗಂಗಾ ಫಾರ್ಮ್,<br>ಕೆ. ಜಿ. ಸರ್ಕಲ್ ಹತ್ತಿರ, ಎನ್. ಹೆಚ್. 4<br>ಬೈಪಾಸ್ ರಸ್ತೆ ಮತ್ತು ಎನ್.ಹೆಚ್. 46 ಜಂಕ್ಷನ್,<br>ನೆಲಮಂಗಲ ಬೆಂಗಳೂರು-562 123<br>2. ಶ್ರೀಮತಿ ಕೆ. ಜಿ. ಗಂಗಮ್ಮ<br>ಕೋಂ ಶ್ರೀ ಟಿ. ಗಂಗಯ್ಯ ನಂ. 4 ರಾಯನ್‌ನಗರ<br>ನೆಲಮಂಗಲ, ಬೆಂಗಳೂರು-562123.<br>3. ಶ್ರೀ ಟಿ. ಗಂಗಯ್ಯ ನಂ. 4 ರಾಯನ್‌ನಗರ,<br>ನೆಲಮಂಗಲ, ಬೆಂಗಳೂರು-562123. |

**ಪ್ರಸ್ತಾವನೆ:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದಲ್ಲಿ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 22,21,254-00 ಗಳನ್ನು ದಿನಾಂಕ: 01.12.2003 ರಿಂದ ಶೇಕಡಾ 19 ರಂತೆ ಬಡ್ಡಿ ಮತ್ತು ಶೇಕಡ 2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ವಾದಿಯವರು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ಈ ನ್ಯಾಯಾಲಯವು ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ದಿನಾಂಕ: 25.02.2004 ರಂದು ಪ್ರತಿವಾದಿಗಳಿಗೆ ನೀಡಿರುವ ನೋಟೀಸಿನಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವಜಪ್ತಿ ಮಾಡಿ ಆದೇಶ ನೀಡಿರುತ್ತದೆ. ಅಲ್ಲದೆ ಪ್ರತಿವಾದಿಗಳು ಈ ನ್ಯಾಯಾಲಯವು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಸದರಿ ಆದೇಶವನ್ನು ಹಿಂದಕ್ಕೆ ಪಡೆಯಬೇಕೆಂದು ಇಚ್ಛಿಸಿದಲ್ಲಿ ರೂ. 22,21,254-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ: 22.03.2004 ರ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿತ್ತು.

ಆದರೆ ವಾದಿಯು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಿನಾಂಕ: 07.05.2004ರ ಪತ್ರದಲ್ಲಿ, ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ: 25.02.2004ರ ಆದೇಶದ ರೀತ್ಯಾ ವಾದಿ ಬ್ಯಾಂಕಿಗೆ ಯಾವುದೇ ಹಣ ಪಾವತಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆ ಮೂಲಕ ಪ್ರತಿವಾದಿಗಳು ಈ ನ್ಯಾಯಾಲಯವು ಮೇಲ್ಕಂಡ ಆದೇಶದಲ್ಲಿ ವಿಧಿಸಿರುವ ಷರತ್ತನ್ನು ಪಾಲಿಸಲು ವಿಫಲರಾಗಿರುತ್ತಾರೆ.

ಆದ್ದರಿಂದ ಈ ನ್ಯಾಯಾಲಯವು ದಿನಾಂಕ: 25.2.2004 ರಂದು ಷರತ್ತಿಗೆ ಒಳಪಟ್ಟು ಹೊರಡಿಸಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು, ಪ್ರತಿವಾದಿಗಳ ಹೆಸರಿನಲ್ಲಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಈ ನ್ಯಾಯಾಲಯದ ಆದೇಶ ಕ್ರಮಾಂಕ: ಜೆಆರ್‌ಬಿ/ಎಂಡಿ:9082:2003-04 ದಿನಾಂಕ: 25.02.2004 ನ್ನು ವಾದಿಯ ಈ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ಸ್ಥಿರೀಕರಿಸಿ, ಈ ಮೂಲಕ ಆದೇಶಿಸಿರುತ್ತೇನೆ.

**ಷೆಡ್ಯೂಲ್ ಆಸ್ತಿಯ ವಿವರ**

**ಷೆಡ್ಯೂಲ್-1**

ಬೆಂಗಳೂರು ಗ್ರಾಮಾಂತರ ನೆಲಮಂಗಲ ತಾಲ್ಲೂಕಿನ, ವಿಶ್ವೇಶ್ವರಪುರ ಗ್ರಾಮ ಕಸಬಾ ಹೋಬಳಿಯ ಸರ್ವೆ ನಂ.10 ರಲ್ಲಿರುವ ಪೂರ್ವದಿಂದ ಪಶ್ಚಿಮಕ್ಕೆ: 15 ಅಡಿ, ಉತ್ತರದಿಂದ ದಕ್ಷಿಣಕ್ಕೆ: 290 ಅಡಿ ಅಳತೆಯುಳ್ಳ 4 ಗುಂಟೆ ಜಮೀನು ಮತ್ತು ಇದರಲ್ಲಿ ಕಟ್ಟಿರುವ ಮನೆ, ಬಾವಿ, ಮರಮಟ್ಟು ಇತ್ಯಾದಿ ಸೇರಿದಂತೆ ಚಕ್ಕುಬಂದಿ:

| | |
|---|---|
| ಪೂರ್ವಕ್ಕೆ : | ಸರ್ವೆ ನಂ. 221/222 |
| ಪಶ್ಚಿಮಕ್ಕೆ : | ಸರ್ವೆ ನಂ. 10 |
| ಉತ್ತರಕ್ಕೆ : | ನ್ಯಾಷನಲ್ ಹೈವೇ ನಂ. 48 |
| ದಕ್ಷಿಣಕ್ಕೆ : | ಸರ್ವೆ ನಂ. 10 ಮತ್ತು 221 |

**ಷೆಡ್ಯೂಲ್-2**

ಬೆಂಗಳೂರು ಗ್ರಾಮಾಂತರ ನೆಲಮಂಗಲ ತಾಲ್ಲೂಕಿನ ಕಸಬಾ ಗ್ರಾಮ, ಕಸಬಾ ಹೋಬಳಿಯ ಸರ್ವೆ ನಂ. 221 ರಲ್ಲಿರುವ ಕೈಗಾರಿಕಾ ಮತ್ತು ಜಿಲ್ಲಾಧಿಕಾರಿಯಿಂದ ಅನುಮತಿ ಪಡೆದು ಕೈಗಾರಿಕಾ ಪ್ರದೇಶವೆಂದು ಪರಿವರ್ತನೆಯಾಗಿರುವ 10 ಗುಂಟೆ ಜಮೀನು ಸೇರಿದಂತೆ ಒಟ್ಟು 4 ಎಕರೆ 25 ಗುಂಟೆ ಜಮೀನಿಗೆ ಚಕ್ಕುಬಂದಿ:

| | |
|---|---|
| ಪೂರ್ವಕ್ಕೆ : | ಪ್ರಸನ್ನ ಆಂಜನೇಯ ಟ್ರಸ್ಟ್‌ಗೆ ಸೇರಿದ ಆಸ್ತಿ |
| ಪಶ್ಚಿಮಕ್ಕೆ : | ಸರ್ವೆ ನಂ. 10 |
| ಉತ್ತರಕ್ಕೆ : | ಸರ್ವೆ ನಂ. 222 |
| ದಕ್ಷಿಣಕ್ಕೆ : | ಪ್ರಸನ್ನ ಆಂಜನೇಯ ಟ್ರಸ್ಟ್‌ಗೆ ಸೇರಿದ ಆಸ್ತಿ |

**ಷೆಡ್ಯೂಲ್-3**

1. ಶಕ್ತಿ ಬ್ಲಾಕ್ ಹೈಡೆನ್ಸಿಟಿ ವಿತ್ ಪೇವ್‌ಮೆಂಟ್ ಬ್ಲಾಕ್ ಮೇಕಿಂಗ್ ಮೆಷಿನ್ ಪ್ಯಾನೆಲ್ ಬೋರ್ಡ್ ಒಟ್ಟು 4 ಹೆಚ್.ಪಿ.+ 3.5 ಹೆಚ್.ಪಿ.+ 1 ಹೆಚ್.ಪಿ. 8.5 ಹೆಚ್.ಪಿ.
2. ಪೇವ್‌ಮೆಂಟ್ ಬ್ಲಾಕ್ ಮೌಲ್ಡ್ ಅಂಡ್ ರಾಮ್ ಈಚ್‌ಡಿಸೈನ್ ಪಿ/ಸ್ಟ್ರೋಕ್ 4 ಬ್ಲಾಕ್ ಆಫ್ 8 ಡಿಫರೆಂಟ್ ಡಿಸೈನ್ಸ್ (ಒಟ್ಟು 8 ಮೌಲ್ಡ್‌ಗಳು)
3. ಭಾರತ್ ಬ್ರಾಂಡ್-ಸೂಪರ್ ಲೆವೆಲಿಂಗ್ ವಿತ್ ರಿಡಕ್ಷನ್ ಗೇರ್ ಬಾಕ್ಸ್ ಕೆ.ಎಂ.ಟಿ. ಕಾಲರ್ ಮಿಕ್ಸಿಂಗ್ ಮೆಷಿನ್-ಕೆ.ಎಂ.ಟಿ.
4. ಕೆ.ಎಂ.ಟಿ. ಬೆಸ್ಟ್ ಇಂಡಿಯನ್ ಮೇಕ್ ಸಿಂಗಲ್ ಡೈಸ್ ಫ್ಲೋರ್ ಪಾಲಿಷಿಂಗ್ ಮೆಷಿನ್
5. ಹೈಡ್ರಾಲಿಕ್ ಸೈಸ್
6. ಡಿ.ಜಿ.ಸೆಟ್
7. ಲಿಟ್ಲ್ ಬ್ಲಾಕ್ ಹೈಡ್ರಾಲಿಕ್ ಆಪರೇಟೆಡ್ ಕಾಂಕ್ರೀಟ್ ಬ್ಲಾಕ್ ಮೇಕಿಂಗ್ ಮೆಷಿನ್.
8. ಲಿಟ್ಲ್ ಬ್ಲಾಕ್ ಹ್ಯಾಂಡ್ ಆಪರೇಟೆಡ್ ಕಾಂಕ್ರೀಟ್ ಬ್ಲಾಕ್
9. ಕಾಂಕ್ರೀಟ್ ಮಿಕ್ಸಿಂಗ್ ಮೆಷಿನ್

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 30.6.2004 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 1109

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,**

**ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001.**

**ವಿಷಯ :** ಇಲಾಖಾ ಮುಖ್ಯಸ್ಥರ ಕಛೇರಿಗಳಲ್ಲಿ ಸಾರ್ವಜನಿಕ ಕುಂದು ಕೊರತೆ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ವಿವರಗಳನ್ನು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಆನಾಸ 9 ಇಭತ 2003 ದಿನಾಂಕ: 17.1.2003.
2. ರಾಜ್ಯ ಆಯೋಗದ ಸಮಸಂಖ್ಯೆಯ ಆದೇಶಗಳ ದಿನಾಂಕ: 24.1.2003 ಮತ್ತು 26.7.2003.
3. ಸರ್ಕಾರದ ಪತ್ರ ಸಂಖ್ಯೆ: ಆನಾಸ 139 ಇಭತ 2003 ದಿನಾಂಕ: 18.7.2003.
4. ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳ ಸುತ್ತೋಲೆ ಸಂಖ್ಯೆ:ಸಿಎಂ:63:ಜಿಇಎನ್:03 ದಿನಾಂಕ: 1.7.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಪತ್ರವನ್ನು ಅನುಸರಿಸಿ, ಕ್ರಮ ಸಂಖ್ಯೆ (2)ರಲ್ಲಿನ ಆದೇಶದಡಿಯಲ್ಲಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಈ ಇಲಾಖೆಯ ಸಾರ್ವಜನಿಕ ಕುಂದುಕೊರತೆಗಳ ಅಧಿಕಾರಿಯಾಗಿ ಕಾರ್ಯನಿರ್ವಹಿಸಲು ಸೂಚಿಸಲಾಗಿತ್ತು, ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳ ಹುದ್ದೆಗೆ ಶ್ರೀಮತಿ ಶ್ರೀದೇವಿ ಎಸ್. ಅಂಗಡಿ ಇವರು ದಿನಾಂಕ: 26.5.2004 ರಂದು ವರದಿ ಮಾಡಿಕೊಂಡಿರುವುದರಿಂದ ಉಲ್ಲೇಖ (3) ಮತ್ತು (4)ರಲ್ಲಿನ ಪತ್ರ: ಸುತ್ತೋಲೆಗಳನ್ನು ಓದಿಕೊಂಡು ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಕರಾಆ: ಆಡಳಿತ: 68:2002-03, ಬೆಂಗಳೂರು, ದಿನಾಂಕ: 22ನೇ ಜುಲೈ 2004**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳಾದ ಶ್ರೀಮತಿ ಶ್ರೀದೇವಿ ಎಸ್. ಅಂಗಡಿ ಇವರನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಇಲಾಖೆಯ ಸಾರ್ವಜನಿಕ ಕುಂದುಕೊರತೆಗಳ ಅಧಿಕಾರಿಯಾಗಿ ಕಾರ್ಯನಿರ್ವಹಿಸಲು ಸೂಚಿಸಿದೆ. ಸದರಿಯವರ ಹೆಸರು, ಹುದ್ದೆ ಮತ್ತು ದೂರವಾಣಿ ಸಂಖ್ಯೆಗಳು ಈ ಕೆಳಕಂಡಂತೆ ಇರುತ್ತದೆ.

| | |
|---|---|
| ಹೆಸರು : | ಶ್ರೀದೇವಿ ಎಸ್. ಅಂಗಡಿ |
| ಹುದ್ದೆ : | ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001. |
| ದೂರವಾಣಿ ಸಂಖ್ಯೆ: | ಕಛೇರಿ: 22355065 |
| | ಮನೆ: 25715494 |

ಸಾರ್ವಜನಿಕರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳಿಗೆ ಸಂಬಂಧಿಸಿದಂತೆ, ತಮ್ಮ ಕುಂದುಕೊರತೆಗಳಿಗೆ, ಮೇಲ್ಕಂಡವರನ್ನು ಮುಖತಃ ಅಥವಾ ದೂರವಾಣಿ ಮೂಲಕ ಸಂಪರ್ಕಿಸಿ, ಕಾನೂನಿನ ಚೌಕಟ್ಟಿನಡಿಯಲ್ಲಿ ಪರಿಹಾರವನ್ನು ಪಡೆದುಕೊಳ್ಳಬಹುದು.

**ನ್ಯಾಯಮೂರ್ತಿ ಟಿ. ಜಯರಾಮ ಚೌಟ**

ಪಿ.ಆರ್. 1110

ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

**ಜಲಸಂಪನ್ಮೂಲ ಇಲಾಖೆ**

**ಕಾರ್ಯಪಾಲಕ ಇಂಜಿನಿಯರ್‌ರವರ ಕಾರ್ಯಾಲಯ, ಪಿಎಚ್‌ಇ (ಕೃಮೇಯೊ) ವಿಭಾಗ, ಬಾಗಲಕೋಟೆ**

**ದೋಷಾರೋಪಣೆ ಪಟ್ಟಿ**

ಶ್ರೀ ಯಲಗುರ್ದಪ್ಪ ಬೆಳ್ಳಪ್ಪ ಪೂಜಾರಿ ಸಿಪಾಯಿ, ಪಿಎಚ್‌ಇ ಕೃಮೇಯೋ, ಉಪ ವಿಭಾಗ ನಂ. 3, ಬೀಳಗಿ ಜಿ: ಬಾಗಲಕೋಟೆ ಆದ ನಿಮ್ಮ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಅಡಿಯಲ್ಲಿ ವಿಚಾರಣೆಯನ್ನು ನಡೆಸಲು ಉದ್ದೇಶಿಸಿದೆ. ಇದಕ್ಕೆ ಸಂಬಂಧಪಟ್ಟಂತೆ ಆಕ್ಷೇಪಣೆಯ ವಸ್ತು ಆರೋಪದ ವಿವರ ಆರೋಪಕ್ಕೆ ಆಧಾರವಾದ ದಾಖಲು ಸಾಕ್ಷಿ ಮತ್ತು ಆರೋಪಕ್ಕೆ ಆಧಾರವಾದ ವ್ಯಕ್ತಿ ಸಾಕ್ಷಿಗಳನ್ನು ಅನುಬಂಧ-I ರಿಂದ ಅನುಬಂಧ-IV ರಲ್ಲಿ ನಮೂದಿಸಿ ಈ ಪತ್ರಕ್ಕೆ ಲಗತ್ತಿಸಲಾಗಿದೆ. ನೀವು ಇದಕ್ಕೆ ಸಂಬಂಧಪಟ್ಟಂತೆ ನಿಮ್ಮ ಲಿಖಿತ ಸಮಜಾಯಿಷಿಯನ್ನು ಈ ಸೂಚನೆ ತಲುಪಿದ ಅಥವಾ ದಿನಪತ್ರಿಕೆಯಲ್ಲಿ ಪ್ರಕಟವಾದ ದಿನಾಂಕದ 15 ದಿನಗಳೊಳಗಾಗಿ ಈ ಕಾರ್ಯಾಲಯಕ್ಕೆ ಸಲ್ಲಿಸಲು ನಿರ್ದೇಶಿಸಲ್ಪಟ್ಟಿರುತ್ತೀರಿ ಹಾಗೂ ನೀವೇ ಸ್ವತಃ ಮೌಖಿಕ ವಿಚಾರಣೆಯನ್ನು ಇಚ್ಛಿಸುವಿರಾ ಎಂಬ ಬಗ್ಗೆ ಸ್ಪಷ್ಟಪಡಿಸತಕ್ಕದ್ದು. ನೀವು ನಿಮ್ಮ ಮೇಲಿನ ಯಾವ ಆರೋಪವನ್ನು ಒಪ್ಪಿಕೊಳ್ಳುವುದಿಲ್ಲವೊ ಅಂತಹ ಆರೋಪದ ಬಗ್ಗೆ ಮಾತ್ರ ವಿಚಾರಣೆ ನಡೆಸಲಾಗುವುದು. ಆದ ಕಾರಣ ನೀವು ನಿಮ್ಮ ಮೇಲಿನ ಆರೋಪವನ್ನು ಸ್ಪಷ್ಟವಾಗಿ ಒಪ್ಪಬೇಕು. ಇಲ್ಲವೆ ನಿರಾಕರಿಸಬೇಕು ಇಲ್ಲವಾದಲ್ಲಿ ಏಕಪಕ್ಷೀಯವಾಗಿ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಯಪಾಲಕ ಇಂಜಿನೀಯರರು, ಪಿಎಚ್‌ಇ (ಯುಕೆಪಿ)
ವಿಭಾಗ, ಬಾಗಲಕೋಟೆ.

**ಸಂ:ಕೃಮೇಯೋ: ಪಿಎಚ್ಇ:ಸಿ:04-05 ದಿನಾಂಕ:**

**ಅನುಬಂಧ-1**

ಶ್ರೀ ಯಲಗುರ್ದಪ್ಪ ಬೆಳ್ಳಪ್ಪ ಪೂಜಾರಿ ಸಿಪಾಯಿ, ಪಿಎಚ್ಇ ಕೃಮೇಯೋ, ಉಪ ವಿಭಾಗ ನಂ. 3, ಬೀಳಗಿ ಆದ ನಿಮ್ಮ ಮೇಲಿನ ಆರೋಪಣೆ ವಸ್ತು ಸದ್ರಿ ನೌಕರರಾದ ನೀವು ದಿನಾಂಕ: 13.10.03 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿ ಆಗಿರುತ್ತೀರಿ. ಈ ನಿಮ್ಮ ಕೃತ್ಯದಿಂದ ನೀವು ಕ.ನಾ.ಸೇ (ನಡತೆ) ನಿಯಮಾವಳಿಗಳು 1966 ನಿಯಮ 3(1) (i) (ii) ಮತ್ತು (iii) ಕ್ಕೆ ವಿರುದ್ಧವಾಗಿ ವರ್ತಿಸಿದ್ದು ತನ್ಮೂಲಕ ಶಿಸ್ತು ಕ್ರಮಕ್ಕೆ ಬದ್ಧರಾಗಿರುತ್ತೀರಿ. ಆದ ಕಾರಣ ನಿಮ್ಮ ಮೇಲೆ ಈ ಆರೋಪ.

**ಅನುಬಂಧ-2**

ಸದರಿ ನೌಕರರ ಮೇಲಿನ ಆರೋಪಣೆ ವಿವರಣೆ, ನೀವು ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ರಜೆ ಅರ್ಜಿಯನ್ನು ಸಹ ಸಲ್ಲಿಸದೇ ದಿನಾಂಕ: 13.10.03 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿ ಆಗಿರುತ್ತೀರಿ. ಈ ರೀತಿಯ ನಿಮ್ಮ ನಡವಳಿಕೆಯಿಂದಾಗಿ ನೀವು ಯಾವ ಉದ್ದೇಶದಿಂದ ಸರ್ಕಾರವು ನಿಮ್ಮನ್ನು ಸೇವೆಗೆ ನೇಮಕಾತಿ ಮಾಡಿಕೊಂಡಿತ್ತೊ ಆ ಉದ್ದೇಶವನ್ನು ಪೂರೈಸದೇ ಸರ್ಕಾರವನ್ನು ವಂಚಿಸಿರುತ್ತೀರಿ ಈ ನಿಮ್ಮ ಕೃತ್ಯವು ಕ.ನಾ.ಸೇ (ನಡತೆ) ನಿಯಮಾವಳಿಗಳು 1966 ರ ನಿಯಮ 3ರ ಉಪ ನಿಯಮ (i) (ii) ಮತ್ತು (iii) ಕ್ಕೆ ವಿರುದ್ಧವಾಗಿದ್ದು, ತನ್ಮೂಲಕ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುತ್ತೀರಿ. ಈ ರೀತಿಯ ಕೃತ್ಯವನ್ನೆಸಗುವುದರ ಮೂಲಕ ಶಿಸ್ತು ಕ್ರಮಕ್ಕೆ ಬದ್ಧರಾಗಿರುತ್ತೀರಿ. ಆದ ಕಾರಣ ನಿಮ್ಮ ಮೇಲೆ ಈ ಆರೋಪ.

**ಅನುಬಂಧ-3**

**ಸದ್ರಿ ನೌಕರರ ಮೇಲಿನ ಆರೋಪಕ್ಕೆ ಆಧಾರವಾದ ದಾಖಲು ಸಾಕ್ಷಿಗಳ ಪಟ್ಟಿ.**

1) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಿಎಚ್ಇ (ಯುಕೆಪಿ) ಉಪ ವಿಭಾಗ, ನಂ. 3, ಬೀಳಗಿ ಇವರ ರಿಕಾಲ್ ಪತ್ರ ಸಂ. 485 ದಿನಾಂಕ: 13.11.03.
2) -ಸದರ- ನಂ. 428 ದಿನಾಂಕ: 16.10.03.
3) -ಸದರ- ನಂ. 441 ದಿನಾಂಕ: 27.10.03.
4) ಪಿಎಚ್ಇ ಕೃಮೇಯೋ, ವಿಭಾಗ ಬಾಗಲಕೋಟೆ ಕಛೇರಿ ಪತ್ರ ಸಂ: 2064 ದಿನಾಂಕ: 4.12.03.
5) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಿಎಚ್ಇ ಉಪ ವಿಭಾಗ ನಂ. 3, ಬೀಳಗಿ ಇವರ ಕ.ಪ.ಸಂ.552: 16/12/2003.
6) ಪಿಎಚ್ಇ, ಕೃಮೇಯೋ ಉಪ ವಿಭಾಗ ನಂ. 3, ಬೀಳಗಿ ಕಛೇರಿ ಹಾಜರಿ ದಾಖಲಾತಿ ಪುಸ್ತಕ ಹಾಗೂ ವೇತನ ಬಟವಾಡೆ ಪುಸ್ತಕ.

**ಅನುಬಂಧ-4**

**ಸದ್ರಿ ನೌಕರರಾದ ನಿಮ್ಮ ಮೇಲಿನ ಆರೋಪಕ್ಕೆ ಆಧಾರವಾದ ವ್ಯಕ್ತಿ ಸಾಕ್ಷಿಗಳ ಪಟ್ಟಿ.**

1) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಿಎಚ್ಇ ಕೃಮೇಯೋ, ಉಪ ವಿಭಾಗ, ನಂ. 3, ಬೀಳಗಿ ಜಿಲ್ಲಾ ಬಾಗಲಕೋಟೆ
2) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಿಎಚ್ಇ ಕೃಮೇಯೋ, ಉಪ ವಿಭಾಗ, ನಂ. 3, ಬೀಳಗಿ ಜಿ. ಬಾಗಲಕೋಟೆ ಇಲ್ಲಿನ ಸಿಬ್ಬಂದಿ ಶಾಖೆ ನಿರ್ವಾಹಕರು.

ಕಾರ್ಯಪಾಲಕ ಇಂಜಿನೀಯರರು, ಪಿಎಚ್ಇ (ಯುಕೆಪಿ)
ವಿಭಾಗ, ಬಾಗಲಕೋಟೆ.

ಪಿ.ಆರ್. 1111

**ಬೆಂಗಳೂರು ನಗರ ಮಾನ್ಯ 9ನೇ ಎಸಿಎಂ.ಎಂ. ನ್ಯಾಯಾಲಯದ ನ್ಯಾಯಾಧೀಶರವರ ಸನ್ನಿಧಾನಕ್ಕೆ**

**ವಿಷಯ :** ಕಲಾಸಿಪಾಳ್ಯ ಪೊಲೀಸ್ ಠಾಣೆಯಲ್ಲಿ ಅಮಾನತ್ತು ಪಡಿಸಿಕೊಂಡಿರುವ ವಾರಸುದಾರರು ಇಲ್ಲದ ವಾಹನಗಳನ್ನು ಮತ್ತು ಇತರೆ ಮಾಲನ್ನು ಬಹಿರಂಗ ಹರಾಜು ಮಾಡಿ ಹಣವನ್ನು ಸರ್ಕಾರಕ್ಕೆ ಕಟ್ಟಲು ಅನುಮತಿ ಕೋರಿ ಮನವಿ.

ಮೇಲ್ಕಂಡ ವಿಷಯದ ಬಗ್ಗೆ ತಮ್ಮ ಘನ ಸನ್ನಿಧಿಯಲ್ಲಿ ಅರಿಕೆ ಮಾಡಿಕೊಳ್ಳುವುದೇನೆಂದರೆ ಕಲಾಸಿಪಾಳ್ಯ ಪೊಲೀಸ್ ಠಾಣೆಯಲ್ಲಿ ವಾರಸುದಾರರು ಇಲ್ಲದೇ ಇರುವ ದ್ವಿಚಕ್ರವಾಹನಗಳನ್ನು ಮತ್ತು ಇತರೆ ಮಾಲನ್ನು ಅಮಾನತ್ತು ಪಡಿಸಿಕೊಳ್ಳಲಾಗಿತ್ತು. ಸದರಿ ವಾಹನಗಳ ಮತ್ತು ಇತರೆ ಮಾಲಿನ ಮಾಲೀಕರನ್ನು ಪತ್ತೆ ಮಾಡುವ ಸಲುವಾಗಿ ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಮತ್ತು ರಾಜ್ಯದ ಎಲ್ಲಾ ಪೊಲೀಸ್ ಠಾಣೆಗಳಿಗೂ ತಿಳಿಸುವಂತೆ ನಿಸ್ತಂತು ಮೂಲಕ ತಿಳಿಸಲಾಗಿತ್ತು ಮತ್ತು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೂ ವಾಹನದ ವಿವರದ ಬಗ್ಗೆ ಮತ್ತು ಮಾಲಿನ ಬಗ್ಗೆ ಸುತ್ತೋಲೆಯನ್ನು ಕಳುಹಿಸಿಕೊಟ್ಟಿತ್ತು. ಆದರೆ ಈ ವಾಹನಗಳ ಮಾಲೀಕರು ಮತ್ತು ಇತರೆ ಮಾಲಿನ ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ವಾಹನಗಳು ಬಹಳ ದಿವಸದಿಂದ ಪೊಲೀಸ್ ಠಾಣೆಯ ಆವರಣದಲ್ಲಿ ಗಾಳಿ, ಬಿಸಿಲು ಮತ್ತು ಮಳೆಗೆ ಸಿಕ್ಕಿ ಹಾಳಾಗುತ್ತಿವೆ, ಇವುಗಳ ಮಾಲೀಕರು ಪತ್ತೆಯಾಗದೆ ಇರುವುದರಿಂದ ವಾಹನಗಳೂ ಬಹಳ ದಿವಸ ಉಪಯೋಗಿಸದೇ ನಿಲ್ಲಿಸಿದರೆ ತುಕ್ಕು ಹಿಡಿದು ಹಾಳಾಗುತ್ತದೆ, ಇದರಿಂದ ಯಾರಿಗೂ ಪ್ರಯೋಜನವಾಗುವುದಿಲ್ಲ. ಆದ್ದರಿಂದ ಸದರಿ ವಾಹನಗಳನ್ನು ಮತ್ತು ಇತರೆ ವಸ್ತುಗಳನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಬಂದ ಹಣವನ್ನು ಸರ್ಕಾರಕ್ಕೆ ಕಟ್ಟಲು ಅನುವಾಗುವಂತೆ ಆದೇಶ ಮಾಡುವಂತೆ ಮತ್ತು ನಗದು ಹಣವನ್ನು ರಿಜರ್ವ್ ಬ್ಯಾಂಕಿಗೆ ಕಟ್ಟಲು ಆದೇಶಿಸುವಂತೆ ಮತ್ತು ಇನ್ನು ಇತರೆ ಮಾಲುಗಳಿಗೆ ಸಂಬಂಧಿಸಿದಂತೆ 16 ವಾಹನಗಳ ವಿವರದ ಮಾಹಿತಿ ಮತ್ತು ಇತರೆ ಮಾಲುಗಳ ವಿವರವನ್ನು ಪ್ರಕಟಿಸಲಾಗಿದೆ.

## List of Un-claimed Vehicles at Kalasipalya Police Station

| Sl. No. | Type of Vehicles | Reg No. Name plate | Engine No. | Chasis No | Make & Model | Colour | P.F. N.O. | Crime No Sec. of Law |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | TVS-50 | KA-01-E-9321 | - | - | TVS | Green | 38/03 | Cmiss No. 119/03 |
| 2. | Bajaj 150 Scooter | MEO-7936 | 146346 | 03E209-151822 | Bajaj | Biscuit | 43/03 | Cmiss No. 158/03 |
| 3. | Bajaj 150 Scooter | MET-9819 | 0360323 8916 | 03C6042487 | Bajaj | Blue | 44/03 | Cmiss No. 159/03 |
| 4. | Bajaj 150 Scooter | MYL-8507 | 76189 | 77387 | Bajaj | Biscuit | 45/03 | Cmiss No. 160/03 |
| 5. | Hero Honda SS | KA-03-H-5310 | - | 10F443239 | Hero Honda | Black | 46/03 | Cmiss No. 164/03 |
| 6. | Yamaha RX-135 | KA-03-EE-329 | L194-524795 | - | Yamaha | Black | 48/03 | Cmiss No. 166/03 |
| 7. | Bajaj Chetak | KA-01-L-2718 | 06L709-021479 | - | Bajaj | Blue | 49/03 | Cmiss No. 172/03 |
| 8. | TVS Champ | KA-02-6547 | - | 19311-1089 | TVS | Black | 50/03 | Cmiss No. 173/03 |
| 9. | TVS 50 | KA-34-E-8945 | - | A407F943 444 | TVS | Black | 51/03 | Cmiss No. 177/03 |
| 10. | TVS Super | KA-01-Q-6820 | - | - | TVS | Blue | 52/03 | Cmiss No. 178/03 |
| 11. | Hero Honda | CKW-3661 | WL2-250-060443 | 06666603 | Hero Honda | Black | 53/03 | Cmiss No. 184/03 |
| 12. | Rewa M/C | KL-25-9204 | 34EBDH-18367 | - | Rewa | Black | 54/03 | Cmiss No. 185/03 |
| 13. | TVS 50 | TAD-6684 | - | 143879-11-87 | TVS | Green | 56/03 | Cmiss No. 188/03 |
| 14. | Auto Ricksha | MH-02-X-2569 | - | - | Bajaj | Black | 96/03 | Cmiss No. 172/03 |
| 15. | Bajaj Chetak | KA-05-K-2104 | 06M930 15395 | 06F930134 26 | Bajaj | Blue | 152/00 | Cmiss No. 391/00 |
| 16. | A/R | KA03-B-1373 | - | - | Bajaj | BLACK | 238/03 | Cmiss No. 829/03 |

**ವಾರಸುದಾರರಿಲ್ಲದ ಮಾಲುಗಳ ಪಟ್ಟಿ, ಕಲಾಸಿಪಾಳ್ಯ ಪೊಲೀಸ್ ಠಾಣೆ, ಬೆಂಗಳೂರು**

| ಕ್ರ.ಸಂ. | ಸಿಮಿಸ್ ನಂ. | ಪಿ.ಎಫ್. ನಂ. | ವಶಪಡಿಸಿಕೊಂಡ ಮಾಲು |
|---|---|---|---|
| 1 | 215/00 | 107/00 | 26,450/- ರೂ. ನಗದು |
| 2 | 119/03 | 38/03 | ಎರಡು ಹಳೆಯ ಸೈಕಲ್‌ಗಳು |
| 3 | 118/03 | 118/03 | ಹಳೆಯ ಕಂಪ್ಯೂಟರ್ಸ್ ಮಾನಿಟರ್ ಎರಡು ಸ್ಪೀಕರ್ |
| 4 | 450/03 | 123/03 | ಒಂದು ಕಪ್ಪು ಬಣ್ಣದ ಲೆದರ್ ಬ್ಯಾಗ್ ಅದರಲ್ಲಿ ಬಟ್ಟೆಗಳು ಒಂದು ಕೈಗಡಿಯಾರ |

ನ್ಯಾಯಾಧೀಶರು

ಪಿ.ಆರ್. 1112 9ನೇ ಎಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು.

## ಜಿಲ್ಲಾ ದಂಡಾಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

### ಅಧಿಸೂಚನೆ ಸಂಖ್ಯೆ: ಆರ್‌ಟಿಎ:ಸಿಆರ್:33:2004-05 ದಿನಾಂಕ: 31ನೇ ಜುಲೈ 2004

ಉಡುಪಿ ನಗರದಲ್ಲಿ ಮಜಲು ವಾಹನಗಳ ಸಂಚಾರ ನಿಯಂತ್ರಣಾ ಮತ್ತು ಸಾರ್ವಜನಿಕ ಹಿತದೃಷ್ಟಿಯನ್ನು ಮನದಲ್ಲಿಟ್ಟುಕೊಂಡು, ಉಡುಪಿ ಜಿಲ್ಲೆಯಾಗುವ ಮೊದಲೇ ಜಿಲ್ಲಾದಂಡಾಧಿಕಾರಿ, ದ.ಕ. ಮಂಗಳೂರುರವರು ಮೋಟಾರು ವಾಹನ ಕಾಯಿದೆ 1988ರಲ್ಲಿ ಸಾರಿಗೆ ವಾಹನಗಳಿಗೆ (ಮಜಲು ವಾಹನ) ಪರವಾನಿಗೆ ನೀಡುವಿಕೆಯು ತುಂಬಾ ಸರಳೀಕೃತವಾಗಿರುವುದರಿಂದ ಪರವಾನಿಗೆ ಪಡೆಯುವ ಎಲ್ಲಾ ಬಸ್ಸುಗಳಿಗೆ ಉಡುಪಿ ಬಸ್ಸು ನಿಲ್ದಾಣದಲ್ಲಿ ನಿಲುಗಡೆಗೊಳಿಸಲು ಸ್ಥಳಾವಕಾಶ ಇಲ್ಲದಿರುವುದರಿಂದಲೂ, ಉಡುಪಿಯ ಹೆಚ್ಚಿನ ಮಾರ್ಗಗಳು ಇಕ್ಕಟ್ಟಾಗಿ ಅಲ್ಲಲ್ಲಿ ವಾಹನ ಸಂಚಾರಕ್ಕೆ ತಡೆಯಾಗುತ್ತಿರುವುದರಿಂದಲೂ ಅಧಿಸೂಚನೆ ಸಂಖ್ಯೆ: ಆರ್‌ಟಿಎ:ಸಿಆರ್:407/93-94 ದಿನಾಂಕ: 26.7.1994ರಲ್ಲಿ ಉಡುಪಿ ನಗರಕ್ಕೆ ವಿವಿಧ ಕಡೆಯಿಂದ ನಂತರದ ದಿನಗಳಲ್ಲಿ ಪರವಾನಿಗೆ ಪಡೆದು ಬರುವ ಬಸ್ಸುಗಳನ್ನು ನಿರ್ಬಂಧಿಸಿ ಅಧಿಸೂಚನೆಯನ್ನು ಹೊರಡಿಸಿದ್ದರು. ಅದರಂತೆ "ಪ್ರಾಧಿಕಾರವು ಮುಂದೆ ಅರ್ಜಿದಾರರ ಕೋರಿಕೆಯಂತೆ ನೀಡಲಿರುವ ಪರವಾನಿಗೆಯಲ್ಲಿ

ಕುಂದಾಪುರ ಕಡೆಯಿಂದ ಬರುವ ಬಸ್ಸುಗಳು ಅಂಬಾಗಿಲಿನವರೆಗೂ, ಮಂಗಳೂರು ಕಡೆಯಿಂದ ಬರುವ ಬಸ್ಸುಗಳು ಕಿನ್ನಿಮೂಲ್ಕಿಯವರೆಗೂ, ಹಿರಿಯಡ್ಕ ಕಡೆಯಿಂದ ಬರುವ ಬಸ್ಸುಗಳು ಮಣಿಪಾಲದವರೆಗೂ, ಮಲ್ಪೆ ಕಡೆಯಿಂದ ಬರುವ ಬಸ್ಸುಗಳು ರಾ.ಹೆ. 17ರ ಬೈಪಾಸ್ (ಆದಿ ಉಡುಪಿ ಬಳಿ) ವರೆಗೂ, ಮೂಡುಬೆಳ್ಳೆಯಿಂದ ಬರುವ ಬಸ್ಸುಗಳು ಮಿಷನ್ ಆಸ್ಪತ್ರೆಯವರೆಗೂ ಮಾತ್ರ ಸಂಚರಿಸುವಂತೆ ಪರವಾನಿಗೆ ನೀಡಬಹುದಾಗಿದೆ."

ಈಗ ಸಾರ್ವಜನಿಕರ ಬಹುದಿನದ ಬೇಡಿಕೆಯನ್ವಯ ಕ.ರಾ.ರ.ಸಾ.ಸಂಸ್ಥೆಯ ಮಿನಿ ಬಸ್ಸುಗಳು ಮಂಗಳೂರಿನ ಬಿಜೈನಿಂದ ಉಡುಪಿಯ ಕಿನ್ನಿಮೂಲ್ಕಿಯವರೆಗೆ, ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ದ.ಕ. ಮಂಗಳೂರಿನಿಂದ ನೀಡಿದ ತಾತ್ಕಾಲಿಕ ಪರವಾನಿಗೆ ಹೊಂದಿ ಪ್ರವರ್ತಿಸುತ್ತಿದ್ದು, ಇದನ್ನು ಉಡುಪಿಯ ಬಸ್ಸು ನಿಲ್ದಾಣದವರೆಗೆ ಸಂಚಾರವನ್ನು ವಿಸ್ತರಿಸಬೇಕೆಂದು ಹಲವಾರು ಸಂಘಟನೆಗಳೂ, ವಿದ್ಯಾರ್ಥಿ ಸಮುದಾಯ, ಸಾರ್ವಜನಿಕ ಪ್ರಯಾಣಿಕರು, ಬಳಕೆದಾರರ ವೇದಿಕೆಯವರು, ಜಿಲ್ಲಾಡಳಿತದ ಮೇಲೆ ಹಲವಾರು ವಿಧದಿಂದ ಒತ್ತಡ ತರುತ್ತಿದ್ದಾರೆ. ಅದರಂತೆ ವಿಭಾಗ ನಿಯಂತ್ರಣಾಧಿಕಾರಿ, ಕ.ರಾ.ರ.ಸಾ.ಸಂಸ್ಥೆ, ಮಂಗಳೂರು ವಿಭಾಗದವರೂ ಸಹಾ ಸಾರ್ವಜನಿಕರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು, ಸಂಸ್ಥೆಯ ಬಸ್ಸುಗಳಿಗೆ ಉಡುಪಿಯ ನಗರಸಭಾ ಬಸ್ಸು ನಿಲ್ದಾಣವನ್ನು ಪ್ರವೇಶಿಸುವುದಕ್ಕಾಗಿ, ಈಗಾಗಲೇ ಇರುವ ಅಧಿಸೂಚನೆಯನ್ನು ಮಾರ್ಪಾಡುಗೊಳಿಸಿ ಉಡುಪಿಯ ಬಸ್ಸು ನಿಲ್ದಾಣದವರೆಗೆ ವಿಸ್ತರಿಸಲು ಅವಕಾಶ ಮಾಡಿಕೊಡುವಂತೆ ಜಿಲ್ಲಾಡಳಿತವನ್ನು ಕೋರಿರುತ್ತಾರೆ.

ಕೆ.ಎಸ್.ಆರ್.ಟಿ.ಸಿ.ಯ ಮಿನಿ ಬಸ್ಸಿನಲ್ಲಿ ಪ್ರಯಾಣಿಸುತ್ತಿರುವ ಪ್ರಯಾಣಿಕರಿಗಾಗುತ್ತಿರುವ ತೊಂದರೆಗಳು ಅನೇಕ ಸಂಘಟನೆಗಳ ಮುಖಾಂತರ ಜಿಲ್ಲಾಡಳಿತದ ಗಮನಕ್ಕೆ ಬಂದಿರುತ್ತದೆ. ಹಿಂದಿನ ಅಧಿಸೂಚನೆಯಾಗಿ ಈಗಾಗಲೇ ಹತ್ತು ವರ್ಷಗಳು ದಾಟಿದ್ದು, ಆ ಅಧಿಸೂಚನೆ ಮಾಡುವಾಗ ಕೆ.ಎಸ್.ಆರ್.ಟಿ.ಸಿ. ಬಸ್ಸುಗಳು ಉಡುಪಿ-ಮಂಗಳೂರು ಮಧ್ಯೆ ಸಂಚರಿಸಲು ಪರವಾನಿಗೆಗಳನ್ನು ಪಡೆಯುತ್ತಾರೆಂಬ ಕಲ್ಪನೆ ಇಲ್ಲದಿರುವುದರಿಂದ, ಅದರಲ್ಲಿ ಸರ್ಕಾರಿ ಸ್ವಾಮ್ಯದ ಬಸ್ಸುಗಳಿಗೆ ಅದು ಅನ್ವಯಿಸುತ್ತದೆಯೇ ಇಲ್ಲವೇ ಎಂದು ಸ್ಪಷ್ಟವಾಗಿ ಹೇಳಿರುವುದಿಲ್ಲ.

ಮೇಲಿನ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು, ಸಾರ್ವಜನಿಕ ಹಿತದೃಷ್ಟಿಯಿಂದ ಶ್ರೀ ಎಸ್. ಆರ್. ಉಮಾಶಂಕರ್, ಭಾ.ಆ.ಸೇ. ಜಿಲ್ಲಾದಂಡಾಧಿಕಾರಿ, ಉಡುಪಿ ಜಿಲ್ಲೆ ಆದ ನಾನು ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 115 ರಂತೆ ಹಾಗೂ ಕರ್ನಾಟಕ ಮೋಟಾರು ವಾಹನ ನಿಯಮ 1989ರ (ತಿದ್ದುಪಡಿ ನಿಯಮಾವಳಿ 1990ರ) ನಿಯಮ 221 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನಂತೆ ಅಧಿಸೂಚನೆ ಹೊರಡಿಸಿರುತ್ತೇನೆ.

ಸರ್ಕಾರಿ (ಕೆ.ಎಸ್.ಆರ್.ಟಿ.ಸಿ.) ಸ್ವಾಮ್ಯದ ಮಜಲು ವಾಹನಗಳಿಗೆ ಈಗಾಗಲೇ ಇರುವ 26.7.1994ರ ಅಧಿಸೂಚನೆ ಅನ್ವಯಿಸುವುದಿಲ್ಲವೆಂಬುದಾಗಿಯೂ, ಸರ್ಕಾರಿ ಸ್ವಾಮ್ಯದ ಬಸ್ಸುಗಳು ಉಡುಪಿ ನಗರದ ಬಸ್ಸು ನಿಲ್ದಾಣದೊಳಗೆ ಪ್ರವೇಶಿಸಲು ಅನುಮತಿ ನೀಡಿ ಮೇಲಿನ ಅಧಿಸೂಚನೆಯಲ್ಲಿರುವ ನಿಷೇಧಾಜ್ಞೆಯಿಂದ ವಿನಾಯಿತಿ ನೀಡಲಾಗಿದೆ.

ಸರ್ಕಾರಿ ಸ್ವಾಮ್ಯದ ಮಜಲು ವಾಹನಗಳನ್ನು ಹೊರತುಪಡಿಸಿ ಉಳಿದಂತೆ ಬೇರೆ ಎಲ್ಲಾ ಮಜಲು ವಾಹನಗಳಿಗೆ ಮೇಲ್ಕಂಡ ಆರ್.ಟಿ.ಎ:ಸಿಆರ್:407/93-94 ದಿನಾಂಕ: 26.7.1994ರ ಅಧಿಸೂಚನೆಯಲ್ಲಿ ನಮೂದಿಸಿರುವ ಎಲ್ಲಾ ಆದೇಶಗಳೂ ಮುಂದುವರಿಯುವುದು.

ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 116ರ ಹಾಗೂ ಕರ್ನಾಟಕ ಮೋಟಾರು ವಾಹನ ನಿಯಮಾವಳಿಗಳು 1989 (ಎರಡನೇ ತಿದ್ದುಪಡಿ ನಿಯಮಾವಳಿಗಳು 1990)ರ ನಿಯಮ 221(2)ರಂತೆ ಈ ಬಗ್ಗೆ ಅವಶ್ಯವಿರುವ ಸಂಜ್ಞೆ ಸೂಚನೆ ಫಲಕಗಳನ್ನು ಅಳವಡಿಸಲು, ಜಿಲ್ಲಾ ಪೋಲಿಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ಇವರು ಅಧಿಕಾರ ಹೊಂದಿರುತ್ತಾರೆ.

ಈ ಅಧಿಸೂಚನೆಯು ದಿನಾಂಕ: 31.7.2004 ರಿಂದ ಮುಂದಿನ ಆದೇಶ ಹೊರಡಿಸುವವರೆಗೆ ಜಾರಿಯಲ್ಲಿರುತ್ತದೆ.

ಈ ಅಧಿಸೂಚನೆಯನ್ನು ನನ್ನ ಸ್ವಹಸ್ತ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

ಪಿ.ಆರ್.1144 ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

## ವಾಣಿಜ್ಯ ತೆರಿಗೆ ಅಧಿಕಾರಿಯವರ ಕಛೇರಿ, 1ನೇ ವರ್ತುಲ, ಉಡುಪಿ

### ಪ್ರಕಟಣೆ

ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ, 1ನೇ ವೃತ್ತ, ಉಡುಪಿ ಈ ಕಛೇರಿಯ ಪರಿವೀಕ್ಷಕರಿಗೆ ವೃತ್ತಿ ತೆರಿಗೆ ವಸೂಲಿಗೆ ಸಂಬಂಧಪಟ್ಟಂತೆ ನೀಡಲಾದ ರಶೀದಿ ಪುಸ್ತಕ ಸಂಖ್ಯೆ 9993 (ರಶೀದಿ ನಂಬರ್ 0499601 ರಿಂದ 0499650ರವರೆಗೆ ದ್ವಿಪ್ರತಿಯಲ್ಲಿದ್ದು ಅದರಲ್ಲಿ ರಶೀದಿ ನಂಬರ್ 0499601 ರಿಂದ 0499616 ರವರೆಗೆ ಉಪಯೋಗಿಸಿದೆ) ಕಳೆದು ಹೋಗಿರುತ್ತದೆ. ಈ ರಶೀದಿಗಳನ್ನು ರದ್ದುಪಡಿಸಿದೆ. ಯಾರಾದರೂ ದುರುಪಯೋಗ ಪಡಿಸಿಕೊಂಡಲ್ಲಿ ಅದು ಅಸಿಂಧುವಾಗಿರುತ್ತದೆ. ಹಾಗೂ ಅದಕ್ಕೆ ಇಲಾಖೆಯು ಜವಾಬ್ದಾರಿಯಲ್ಲವೆಂದು ಈ ಮೂಲಕ ಪ್ರಚುರಪಡಿಸಿದೆ.

ಪಿ.ಆರ್.1149 ವಾಣಿಜ್ಯ ತೆರಿಗೆ ಅಧಿಕಾರಿ, 1ನೇ ವೃತ್ತ, ಉಡುಪಿ.

## IN THE COURT OF COMMISSIONER FOR WORKMEN'S COMPENSATION, BIDAR.

**No. LOB/WCA/Cr-32/2004**

**Applicants:** V/s **Respondents:**

Applicants:

1. Sidram S/o Bandappa Beerge, Age, Major, Occ: Agl. R/o Aurad-B, Dist. Bidar & 3 Others.

Respondents:

1. Basavaraj S/o Sharnappa Hokrane, Age. Major Occ: Owner of Tempo KA-38/2812. R/o Aurad-B, Dist. Bidar.
2. National Insurance. Co. Ltd., Bidar.

## PROCLAMATION

Sri Late Sidram F/o. Balaji R/o Aurad-B Dist Bidar have/has filed application in this Court claiming compensation stating that Late: Balaji was working as Cleaner Under the Respondent No. R-1 he met with an accident arising out of and during the course of employment as a result he died on. 29.4.2004

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner for workmen's
Compensation, Bidar.

PR-1114

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂ: ಕಾಪಕಾ:ಎಫ್:ಎಸ್ಆರ್:23:2004**

**ಅರ್ಜಿದಾರರು :**

1. ಶ್ರೀ ತಿಮ್ಮಯ್ಯ ಬಿನ್ ದೊಡ್ಡಯ್ಯ 39 ವರ್ಷ
2. ಶ್ರೀಮತಿ ಸುಶೀಲ ಕೋಂ ತಿಮ್ಮಯ್ಯ, 55 ವರ್ಷ
ವಾಸ: ಹಾಲುವಾಗಿಲು ಗ್ರಾಮ, ಕಸಬಾ ಹೋಬಳಿ, ಹಾಸನ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀಮತಿ ಸಾಜೀದಾಖಾನಮ್ ಕೋಂ ಸಮಿಅಹಮ್ಮದ್ ಬಜಾರ್ ಸ್ಟ್ರೀಟ್, ಅರಸೀಕೆರೆ ಟೌನ್, ಹಾಸನ ಜಿಲ್ಲೆ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ., ಹೇಮಾ ಮ್ಯಾನಷನ್, ಗಾಂಧಿಬಜಾರ್, ಹಾಸನ ಸಿಟಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಗಿರೀಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 21.9.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1115

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂ: ಕಾಪಕಾ:ಎಫ್:ಎಸ್ಆರ್:27:2004**

**ಅರ್ಜಿದಾರರು :**

1. ಶ್ರೀಮತಿ ಲಕ್ಷ್ಮಿ ಕೋಂ ಹೆಚ್. ಎಂ. ರಮೇಶ ಉರುಫ್ ರಾಮಣ್ಣ 32 ವರ್ಷ
2. ಹೆಚ್. ಆರ್. ಅನಿತ ಬಿನ್ ಹೆಚ್. ಎಂ. ರಮೇಶ ಉರುಫ್ ರಾಮಣ್ಣ, 13 ವರ್ಷ
3. ಹೆಚ್. ಆರ್. ಮನು ಬಿನ್ ಹೆಚ್. ಎಂ. ರಮೇಶ್ ಉರುಫ್ ರಾಮಣ್ಣ, 11 ವರ್ಷ
4. ಶ್ರೀ ಮಂಜೇಗೌಡ ಬಿನ್ ಮಟೇಗೌಡ, 75 ವರ್ಷ
5. ಶ್ರೀಮತಿ ಮಂಜಮ್ಮ ಕೋಂ ಮಂಜೇಗೌಡ, 70 ವರ್ಷ

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀ ವಸಂತಯ್ಯ ಬಿನ್ ಚಿಕ್ಕೇಗೌಡ, ಟಾಟಾ ಸುಮೊ ಮಾಲೀಕರು, ಇಡಬ್ಲ್ಯೂಎಸ್ 397, 11ನೇ ಕ್ರಾಸ್, ಕುವೆಂಪು ನಗರ, ಹಾಸನ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ನಿ., ಹೇಮಾ ಮ್ಯಾನ್‌ಷನ್ 2ನೇ ಮಹಡಿ, ಗಾಂಧಿಬಜಾರ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹೆಚ್. ಎಂ. ರಮೇಶ್ ಉ: ರಾಮಣ್ಣ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 1.1.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1116

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ: ಕಾಪಕಾ:ಎಫ್:ಎಸ್‌ಆರ್:25:2004**

**ಅರ್ಜಿದಾರರು :**

1. ಶ್ರೀ ಚಂದ್ರಯ್ಯ ಬಿನ್ ಮೂಡಲಗಿರಿಯಯ್ಯ, 50 ವರ್ಷ
2. ಶ್ರೀಮತಿ ಸಿದ್ದಗಂಗಮ್ಮ ಕೋಂ ಚಂದ್ರಯ್ಯ, 46 ವರ್ಷ

**ವಾಸ:** ಕರುಗುಂದಗ್ರಾಮ, ಜಾವಗಲ್ ಹೋಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀಮತಿ ಲಲಿತಮ್ಮ ಕೋಂ ಕೆ.ಎಂ. ರುದ್ರೇಗೌಡ, 60 ವರ್ಷ
**ವಾಸ:** ಕರುಗುಂದ ಗ್ರಾಮ, ಜಾವಗಲ್ ಹೋಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ.
2. ವಿಭಾಗೀಯ ವ್ಯವಸ್ಥಾಪಕರು, ವಿಭಾಗೀಯ ಕಛೇರಿ, ನ್ಯಾಷನಲ್ ವಿಮಾ ಕಂಪೆನಿ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಪ್ರಕಾಶ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18.9.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1117

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ: ಕಾಪಕಾ:ಎಫ್:ಎಸ್‌ಆರ್:26:2004**

**ಅರ್ಜಿದಾರರು :**

1. ಶ್ರೀಮತಿ ಪುಟ್ಟಕ್ಕಯ್ಯ ಕೋಂ ಬಸವರಾಜಪ್ಪ ಟಿ.ವಿ.,
2. ಹೆಚ್. ಟಿ. ಕುಮಾರ ಬಿನ್ ಟಿ. ವಿ. ಬಸವರಾಜಪ್ಪ,
3. ಹೆಚ್. ಬಿ. ನಾಗರಾಜಪ್ಪ ಬಿನ್ ಟಿ. ಬಿ. ಬಸವರಾಜಪ್ಪ

**ವಾಸ:** ಹಳ್ಳಿಮೈಸೂರು ಹಳ್ಳಿಮೈಸೂರು ಹೋಬಳಿ, ಹೊಳೇನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀ ಲೋಕೇಶ ಬಿನ್ ತಿಮ್ಮೇಗೌಡ, ಜಕ್ಕೇನಹಳ್ಳಿ ಗ್ರಾಮ, ದುದ್ದ ಹೋಬಳಿ, ಹಾಸನ ತಾಲ್ಲೂಕು.
2. ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಕನ್ನಿಕಾ ಪರಮೇಶ್ವರಿ ದೇವಸ್ಥಾನದ ಹತ್ತಿರ, ಗಾಂಧಿಬಜಾರ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹೆಚ್. ಬಿ. ಕೆಂಡಗಣ್ಣಸ್ವಾಮಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 01.11.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1118

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂ: ಕಾಅಗ:ಕಾನಪ:70/03:320: ದಿನಾಂಕ: 28ನೇ ಜುಲೈ 2004**

**ಅರ್ಜಿದಾರರು :**

1. ಫಕ್ಕೀರಪ್ಪ S/o ಹೆಗ್ಗಪ್ಪ ಕರಿಯಮ್ಮನವರ್ ಬಸ್ತಿಕೇರಿ ಲಕ್ಷ್ಮೇಶ್ವರ ಪಟ್ಟಣದಲ್ಲಿ ಶಿರಹಟ್ಟಿ ತಾಲ್ಲೂಕು, ಗದಗ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**

1. ಗೋವರ್ಧನದಾಸ S/o ಬಿಹಾರಿಲಾಲ್ ಬುಟ್ಟದ ನಂ. 299/ಎ ಅರಳಿಕಟ್ಟೆ ಹತ್ತಿರ ಸ್ಟೇಷನ್ ರಸ್ತೆ: ಬಾಗಲಕೋಟೆ.
2. ಬ್ರಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ಬಾಗಲಕೋಟೆ ಹಾಗೂ ಗದಗ.

**ತಿದ್ದುಪಡಿ ಪ್ರಕಟಣೆ:**

ಅರ್ಜಿದಾರರಾದ ಶ್ರೀ ಫಕ್ಕೀರಪ್ಪ S/o ಹೆಗ್ಗಪ್ಪ ಕರಿಯಮ್ಮನವರ ಇವರು, ತಾವು ಮೃತ ಮಹಂತೇಶ ಇವರ ತಂದೆ ಮತ್ತು ಆಶ್ರಿತರು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಮಹಂತೇಶ ಇವರು ಒಂದನೇ ಪ್ರತಿವಾದಿಗಳಾದ ಗೋವರ್ಧನದಾಸ್ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ
ಪಿ.ಆರ್. 1119 ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಮಪ್ರ:224:2004 ದಿನಾಂಕ: 27ನೇ ಜುಲೈ 2004**

**ಪ್ರಕಟಣೆ**

| ಅರ್ಜಿದಾರರು : | ವಿರುದ್ಧ | ಪ್ರತಿವಾದಿಗಳು : |
|---|---|---|
| 1. ಶ್ರೀ ಕಾಳಯ್ಯ ತಂದೆ ಸಣ್ಣಯ್ಯ R/o ಕೋಡಿಹಳ್ಳಿ ತಾ: ಹೊಳೇನರಸೀಪುರ ಜಿಲ್ಲಾ: ಹಾಸನ | | 1. ಶ್ರೀಮತಿ ಜ್ಯೋತಿ ಗಂಡ ನಾಗರಾಜ ಚಬ್ಬಿ R/o ಹಿರೇಪೇಟೆ ಹಳೇ ಹುಬ್ಬಳ್ಳಿ |
| 2. ಜಯಮ್ಮ W/o ಕಾಳಯ್ಯ R/o ಕೋಡಿಹಳ್ಳಿ ಹೊಳೇನರಸೀಪುರ ಜಿಲ್ಲೆ: ಹಾಸನ. | | 2. ದಿ. ಬ್ರ್ಯಾಂಚ್ ಮ್ಯಾನೇಜರ ದಿ. ಓರಿಯೆಂಟಲ್ ಇನ್ಸುರೆನ್ಸ್ ಲಿ. ಹೊಸಪೇಟೆ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ: ಗಾಯ: ಶ್ರೀ:ಶ್ರೀಮತಿ: ಲೋಕೇಶ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 16.6.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ: ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ: ಗಾಯ: ಲೋಕೇಶರವರ ವಾರಸುದಾರರಾದ ಶ್ರೀ:ಶ್ರೀಮತಿ: ಕಾಳಯ್ಯ ಮತ್ತು ಜಯಮ್ಮ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ: ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಪಿ.ಆರ್. 1120 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ.**

**ಸಂಖ್ಯೆ: ಅಮೊ:ವೆಸ್ಪಾ:1068/1996-97 ದಿನಾಂಕ: 31ನೇ ಜುಲೈ 2004**

**ವಿಷಯ :** ವನ್ಯಪ್ರಾಣಿಗಳ ಕಳ್ಳಬೇಟೆಗಾಗಿ ತೊಡಗಿಸಲಾಗಿದ್ದ ಸರ್ಕಾರದ ಪರ ವಶಪಡಿಸಿಕೊಂಡ ಎಲ್‌ಎಮ್‌ಎಲ್ ವೆಸ್ಪಾ ಸ್ಕೂಟರ್ ನೋಂದಣಿ ಸಂಖ್ಯೆ: GA-02-F-1068ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :** 1. ವಲಯ ಅರಣ್ಯಾಧಿಕಾರಿ, ನಾಗವಳ್ಳಿ ವನ್ಯಜೀವಿ ವಲಯ, ಕೋಗಾರು ಇವರ ಪತ್ರ ಸಂಖ್ಯೆ: ಕೋ.ವ.ವ. ಅ.ಅ.ಪ್ರ-56/96-97 ದಿನಾಂಕ: 28.08.1996.

2. ಈ ನ್ಯಾಯಾಲಯದಿಂದ ವಾಹನದ ಮಾಲೀಕರಿಗೆ ನೀಡಲಾದ ಷೋಕಾಸ್ ನೋಟೀಸ್ ದಿನಾಂಕ: 24.01.2002, 08.12.2003 ಮತ್ತು 20.02.2004 ಹಾಗೂ ಕ್ರಾಂತಿ ದೀಪ ಕನ್ನಡ ದಿನ ಪತ್ರಿಕೆಯ ದಿನಾಂಕ: 26.12.2001ರ ಪ್ರಕಟಣೆ.

**ಪ್ರಕರಣದ ಹಿನ್ನೆಲೆ:** ದಿನಾಂಕ: 19.08.1996 ರಂದು ಸಂಜೆ, ನಾಗವಳ್ಳಿ ವನ್ಯಜೀವಿ ವಲಯದ (ಪ್ರಸ್ತುತ ಶರಾವತಿ ವನ್ಯಜೀವಿ ವಲಯ) ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿ ವರ್ಗದವರು ಜಂಗಲ್ ಗಸ್ತು ಮಾಡುತ್ತಿರುವಾಗ ಖಚಿತ ವರ್ತಮಾನದ ಮೇರೆಗೆ, ಕಟ್ಟಿನಕಾರು-ಪಡುಬೀಡು ಹತ್ತಿರ ಕಾಯುತ್ತಿದ್ದಾಗ, ಸ್ಕೂಟರ್ ಒಂದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ, ಇಲಾಖಾ ಸಿಬ್ಬಂದಿಯವರನ್ನು ಗಮನಿಸಿ, ಸ್ಕೂಟರ್‌ನ್ನು ಸ್ವಲ್ಪ ದೂರದಲ್ಲೇ ನಿಲ್ಲಿಸಿ, ಸ್ಕೂಟರಿನಲ್ಲಿದ್ದ ವ್ಯಕ್ತಿಗಳು ಓಡಲು ಪ್ರಯತ್ನಿಸಿದಾಗ, ಸಿಬ್ಬಂದಿಯವರು ಶ್ರಮವಹಿಸಿ ವ್ಯಕ್ತಿಗಳನ್ನು ಹಿಡಿದು ಸ್ಥಳಕ್ಕೆ ಕರೆತಂದು ಡ್ಯಾಶ್ ಬಾಕ್ಸನ್ನು ಪರಿಶೀಲಿಸಲಾಗಿ, ಮೂರು ಶೆಲ್ಲಿನ ಬ್ಯಾಟರಿ, ಬಂದೂಕಿಗೆ ಬಳಸುವ ಮಸಿಗುಂಡು, ಸ್ಟೀಲ್ ಚಾಕು ಕಂಡುಬಂದಿದ್ದು, ಈ ವಸ್ತುಗಳ ಬಗ್ಗೆ ವಿಚಾರಿಸಲಾಗಿ, ಕಾಡು ಪ್ರಾಣಿಗಳ ಬೇಟೆಗಾಗಿ

ಭಟ್ಕಳದಲ್ಲಿ ಖರೀದಿಸಿರುವುದಾಗಿ ಒಪ್ಪಿಕೊಂಡ ಮೇರೆಗೆ, ಈ ಕೃತ್ಯವು ಕಾನೂನಿಗೆ ವಿರುದ್ಧವಾದ್ದರಿಂದ ಕಳ್ಳ ಬೇಟೆಗೆ ಬಳಸುವ ವಸ್ತುಗಳನ್ನು ಹೊಂದಿದ್ದ ವಾಹನವನ್ನು ವಶಪಡಿಸಿಕೊಂಡು, ವಾಹನ ನೊಂದಣಿ ಸಂಖ್ಯೆ ನೋಡಲಾಗಿ ನೀಲಿ ಮಿಶ್ರಿತ ಕಪ್ಪು ಬಣ್ಣದ ಸ್ಕೂಟರ್ ಆಗಿದ್ದು, ಅದರ ನೋಂದಣಿ ಸಂಖ್ಯೆ ಜಿಎ-02-ಎಫ್-1068, ಎಲ್ಎಮ್ಎಲ್ ವೆಸ್ಪಾ ಎನ್‌ವಿ-ಟಿ5 ಎಂದೂ, ಛಾಸ್ಸಿಸ್ ಸಂಖ್ಯೆ ಸಿಹೆಚ್-949148 ಎಂದು ಕಂಡುಬಂದಿದೆ. ನಂತರ ಡ್ಯಾಶ್ ಬಾಕ್ಸ್‌ನಲ್ಲಿ ಪ್ಲಾಸ್ಟಿಕ್ ಚೀಲದಲ್ಲಿದ್ದ ವಸ್ತುಗಳನ್ನು ನೋಡಿ ತೂಕ ಮಾಡಲಾಗಿ ಬಂದೂಕಿನ ಮಸಿ 100 ಗ್ರಾಂ, ಗುಂಡು ಮತ್ತು ಸೀಸ ಅಂದಾಜು 100 ಗ್ರಾಂ, ಕೇಪು 10 ಸಂಖ್ಯೆ ಮತ್ತು ಒಂದು ಸ್ಟೀಲ್ ಚಾಕು ಇದ್ದು, ಎಲ್ಲಾ ವಸ್ತುಗಳನ್ನು ಪುನಃ ಪ್ಲಾಸ್ಟಿಕ್ ಚೀಲಕ್ಕೆ ಹಾಕಿ ಚೀಲದ ಮೇಲೆ ಮತ್ತು ಸ್ಕೂಟರ್ ಮೇಲೆ ಕೆಂಪು ಬಣ್ಣದಿಂದ ಅರಣ್ಯ ಮೊಕದ್ದಮೆ ದಾಖಲಿಸಿ, ಸಂಖ್ಯೆ: 2/1996-97 ದಿನಾಂಕ: 19.8.1996 ಎಂದು ಬರೆದು ಸ್ಥಾನಿಕ ಪಂಚನಾಮೆ ಜರುಗಿಸಿ, ಆರೋಪಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ.

ಪ್ರಥಮ ಮಾಹಿತಿ ವರದಿ (ನಿಶಾನೆ-1), ಸ್ಥಾನಿಕ ಪಂಚನಾಮೆ (ನಿಶಾನೆ-2) ಸ್ವಾಧೀನ ಪಡಿಸಿಕೊಂಡ ವರದಿ (ನಿಶಾನೆ-3) ಗಳೊಂದಿಗೆ ಅಮಾನತ್ತು ಪಡಿಸಿಕೊಂಡ ವಾಹನವನ್ನು ಈ ನ್ಯಾಯಾಲಯದ ಸಮಕ್ಷಮ ದಿನಾಂಕ: 23.08.1996 ರಂದು ವನ್ಯಜೀವಿ ಸಂರಕ್ಷಣಾ ಕಾಯಿದೆ 1972 ಹಾಗೂ 1963ರ ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71-ಎ ಪ್ರಕಾರ ಮುಂದಿನ ಕ್ರಮ ತೆಗೆದುಕೊಳ್ಳಲು ಹಾಜರುಪಡಿಸಿರುತ್ತಾರೆ. ಮುಂದಿನ ಆದೇಶವಾಗುವವರೆಗೆ ಸದರಿ ವಸ್ತುಗಳು ಮತ್ತು ವಾಹನವನ್ನು ವಲಯ ಅರಣ್ಯಾಧಿಕಾರಿ, ನಾಗವಳ್ಳಿ ವನ್ಯಜೀವಿ ವಲಯ, (ಪ್ರಸ್ತುತ ಶರಾವತಿ ವನ್ಯಜೀವಿ ವಲಯ) ಕೋಗಾರು ಇವರ ಸುಪರ್ದಿಯಲ್ಲಿ ಸುರಕ್ಷತೆಗಾಗಿ ಇರಿಸಿಕೊಳ್ಳಲು ಆದೇಶ ನೀಡಲಾಗಿತ್ತು.

ಮೇಲ್ಕಂಡ ವಾಹನದ ನೋಂದಣಿ ದೃಢೀಕರಣ ಮತ್ತು ಮಾಲೀಕತ್ವದ ಬಗ್ಗೆ ಸಾರ್ವಜನಿಕರ ಗಮನಕ್ಕೆ ತರಲು, ಕ್ರಾಂತಿದೀಪ ದಿನ ಪತ್ರಿಕೆಯಲ್ಲಿ ದಿನಾಂಕ: 26.12.2001 ರಂದು ಪ್ರಕಟಣೆಯನ್ನು ಹೊರಡಿಸಲಾಗಿದೆ. ಮುಂದುವರೆದು, ಸಹಾಯಕ ಸಾರಿಗೆ ನಿರ್ದೇಶಕರು, ವಾಸ್ಕೋಡಗಾಮ, ಗೋವ ರವರು ವಾಹನದ ನೊಂದಾಯಿತ ಮಾಲೀಕರ ವಿಳಾಸ ತಿಳಿಸಿದಂತೆ, ಶ್ರೀ ಶೇಖ್ ಅಬ್ದುಲ್ ಬಿನ್ ಶೇಖ್ ಅಬ್ದುಲ್ ಖರೀಂ, ಬೈನಾ ಇವರಿಗೆ ವಾಹನದ ಮಾಲೀಕತ್ವದ ಬಗ್ಗೆ ದಾಖಲಾತಿ ಒಪ್ಪಿಸುವಂತೆ ನೊಂದಾಯಿತ ಅಂಚೆ ಮೂಲಕ ಈ ನ್ಯಾಯಾಲಯದ ಕಛೇರಿಯಿಂದ ದಿನಾಂಕ: 24.01.2002, 08.12.2003 ಮತ್ತು 20.02.2004 ರಂದು ಕಳುಹಿಸಲಾಗಿದ್ದು, ಸದರಿ ನೋಟೀಸ್‌ಗಳು ವಾಪಸ್ಸು ಬಂದಿರುತ್ತವೆ.

ಈ ಮೊಕದ್ದಮೆಗೆ ಸಂಬಂಧಪಟ್ಟಂತೆ, ಸಾಕಷ್ಟು ಕಾಲಾವಕಾಶ ಕೊಟ್ಟರೂ ವಾಹನದ ವಾರಸುದಾರರು ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೂ ಕೋರದೇ ಇರುವುದರಿಂದ, ಈ ವಾಹನ ಕಾಡು ಪ್ರಾಣಿಗಳ ಕಳ್ಳಬೇಟೆಯಲ್ಲಿ ನಿರತವಾದುದೆಂದು ದೃಢಪಡುತ್ತದೆ. ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ, ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು 1963ರ ಅರಣ್ಯ ಕಾಯಿದೆ ಸೆಕ್ಷನ್ 71-ಎ ಮತ್ತು ವನ್ಯಜೀವಿ ಸಂರಕ್ಷಣಾ ಕಾಯಿದೆ 1972 ಅಧಿನಿಯಮ 32ರ ಪ್ರಕಾರ ಮೇಲ್ಕಾಣಿಸಿದ ನೀಲಿ ಮಿಶ್ರಿತ ಕಪ್ಪು ಬಣ್ಣದ ಎಲ್ಎಮ್ಎಲ್ ವೆಸ್ಪಾ ಸ್ಕೂಟರ್ ನೋಂದಣಿ ಸಂಖ್ಯೆ ಜಿಎ-02-ಎಫ್-1068 ಎನ್‌ವಿಟಿ5 ಎಂದೂ, ಛಾಸ್ಸಿಸ್ ಸಂಖ್ಯೆ: ಸಿಹೆಚ್-949148 ಎಂಬ ವಾಹನವನ್ನು ಹಾಗೂ ಪ್ಲಾಸ್ಟಿಕ್ ಚೀಲದಲ್ಲಿದ್ದ ಬಂದೂಕಿನ ಮಸಿ 100 ಗ್ರಾಂ, ಗುಂಡು ಮತ್ತು ಸೀಸ ಅಂದಾಜು 100 ಗ್ರಾಂ, ಕೇಪು 10 ಸಂಖ್ಯೆ ಮತ್ತು ಒಂದು ಸ್ಟೀಲ್ ಚಾಕುಗಳನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡಲು ಸಹ ಈ ಮೂಲಕ ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಮೇಲ್ಕಂಡ ವಸ್ತುಗಳು ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತವೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದೇ ಇದ್ದರೆ, ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 31.07.2004 ರಂದು ಬೆರಳಚ್ಚಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ. ಎ. ಎನ್. ಕರ್ಕೀಕರ್**

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಅನುಬಂಧ-1**

1. ಪ್ರಥಮ ಮಾಹಿತಿ - ನಿಶಾನೆ-1
2. ಸ್ಥಳ ಪಂಚನಾಮೆ - ನಿಶಾನೆ-2
3. ಜಪ್ತಿ ವರದಿ - ನಿಶಾನೆ-2

**ಅನುಬಂಧ-1**

1. ಪ್ಲಾಸ್ಟಿಕ್ ಚೀಲದಲ್ಲಿನ ವಸ್ತುಗಳು.
2. ನೀಲಿ ಮಿಶ್ರಿತ ಕಪ್ಪು ಬಣ್ಣದ ಎಲ್ಎಮ್ಎಲ್ ವೆಸ್ಪಾ ಸ್ಕೂಟರ್

**ಜಿ. ಎ. ಎನ್. ಕರ್ಕೀಕರ್**

ಪಿ.ಆರ್. 1121

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

## ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ

**ಉಪಸ್ಥಿತರು :** ಶ್ರೀ ಮಹಮದ್ ಇಲಿಯಾಸ್ ಅಹಮದ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ ಆರೋಪಿಗಳು** |
|---|---|
| 1. ಆರಕ್ಷಕ ಉಪ ನಿರೀಕ್ಷಕರು, ಅಪರಾಧ ವಿಭಾಗ, ಗೋಣಿಕೊಪ್ಪ ಠಾಣೆ, ಗೋಣಿಕೊಪ್ಪ | ಪತ್ತೆ ಆಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 19.6.2000 ರಂದು ಗೋಣಿಕೊಪ್ಪ ಆರಕ್ಷಕ ಠಾಣೆಯ ಅಪರಾಧ ವಿಭಾಗದ ಆರಕ್ಷಕ ಉಪ ನಿರೀಕ್ಷಕರಿಗೆ ವಿರಾಜಪೇಟೆ ಕಡೆಯಿಂದ ಗೋಣಿಕೊಪ್ಪದ ಕಡೆಗೆ ಜೀಪು ನಂ. ಕೆಎ-02-2373 ರಲ್ಲಿ ಅಕ್ರಮವಾಗಿ ಸಾರಾಯಿ ಪ್ಯಾಕೇಟುಗಳು ಹಾಗೂ ಮದ್ಯಸಾರದ ಸಾಗಾಣಿಕೆ ಆಗುತ್ತಿದೆ ಎಂಬುದಾಗಿ ದೂರವಾಣಿ ಕರೆ ಮೂಲಕ ದೊರೆತ ಪುಕಾರಿನ ಅನ್ವಯ ಜೀಪಿನಲ್ಲಿ ಇತರೆ ಸಿಬ್ಬಂದಿಯವರನ್ನು ಕರೆದುಕೊಂಡು ಹಾತೂರು ಗ್ರಾಮದ ಶಾಲೆಯ ಬಳಿ ಹೋಗಿ ಕಾದು ಕುಳಿತಿದ್ದಾಗ ಸಂಜೆ ಸುಮಾರು 5.00 ಗಂಟೆಗೆ ವಿರಾಜಪೇಟೆ ಕಡೆಯಿಂದ ಜೀಪು ನಂ. ಕೆಎ-02-2373 ಅತೀ ವೇಗದಿಂದ ಬರುತ್ತಿದ್ದು ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಸ್ಥಳದಲ್ಲಿ ನಿಲ್ಲಿಸದೇ ಸ್ವಲ್ಪ ದೂರ ಹೋಗಿ ನಿಲ್ಲಿಸಲು ಸಿಬ್ಬಂದಿಯವರು ಸುತ್ತುವರಿಯುವಷ್ಟರಲ್ಲಿ ಜೀಪಿನ ಚಾಲಕ ಮತ್ತು ಇನ್ನೊಬ್ಬ ಆಸಾಮಿಯು ಜೀಪಿನಿಂದ ಇಳಿದು ಓಡಿ ಹೋಗಿರುತ್ತಾರೆ. ನಂತರ ಜೀಪನ್ನು ಪರಿಶೀಲಿಸಿದಾಗ ಜೀಪಿನ ಹಿಂಬದಿಯಲ್ಲಿ ನೀಲಿ ಬಣ್ಣದ ಪ್ಲಾಸ್ಟಿಕ್ ಕವರ್ ಇದ್ದು ಅದನ್ನು ತೆಗೆಸಿ ನೋಡಿದಾಗ ಗೋಣಿಚೀಲಗಳಲ್ಲಿ ಸಾರಾಯಿ ಪ್ಯಾಕೇಟು ಮತ್ತು ತೆರಿಗೆ ರಹಿತ ಮದ್ಯ ಪತ್ತೆ ಆಗಿದ್ದು ಅವುಗಳನ್ನು ಸದರಿ ಜೀಪಿನಲ್ಲಿ ಸಾಗಾಣಿಕೆ ಮಾಡಲು ರಹದಾರಿ ಪತ್ರ ವಗೈರೆ ವಿಚಾರಿಸಿದಾಗ ಯಾವುದೂ ಇಲ್ಲವೆಂದು ತಿಳಿಸಿದ ಪ್ರಯುಕ್ತ ಜೀಪಿನಲ್ಲಿದ್ದ ಚೀಲಗಳನ್ನು ಬಿಚ್ಚಿ ಎಣಿಸಿ ನೋಡಿದಾಗ 1ನೇ ಚೀಲದಲ್ಲಿ 360x100 ಎಂ.ಎಲ್., 2ನೇ ಚೀಲದಲ್ಲಿ 480x100 ಎಂ.ಎಲ್., 3ನೇ ಚೀಲದಲ್ಲಿ 370x100 ಎಂ.ಎಲ್., 4ನೇ ಚೀಲದಲ್ಲಿ 300x100 ಎಂ.ಎಲ್., 5ನೇ ಚೀಲದಲ್ಲಿ 390x100 ಎಂ.ಎಲ್. ಒಟ್ಟು 2000x100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳು ಪತ್ತೆ ಆಗಿರುತ್ತದೆ. ನಂತರ ಎರಡು ಪ್ಲಾಸ್ಟಿಕ್ ಕ್ಯಾನ್ ಇದ್ದು ಅದರಲ್ಲಿ ಪರಿಶೀಲಿಸಿ ನೋಡಲಾಗಿ 40 ಲೀಟರ್ ಕ್ಯಾನುಗಳಾಗಿದ್ದು ಅವುಗಳಲ್ಲಿ ಅಂದಾಜು 35 ಲೀಟರ್ ನಂತೆ ಒಟ್ಟು 700 ಲೀಟರ್ ಮದ್ಯಸಾರ ಪತ್ತೆ ಆಗಿರುತ್ತದೆ.

ಮೇಲ್ಕಂಡ ಎಲ್ಲಾ ಸ್ವತ್ತುಗಳನ್ನು ಜೀಪು ಸಮೇತ ಸ್ವಾಧೀನ ಪಡಿಸಿಕೊಂಡು ಗೋಣಿಕೊಪ್ಪ ಠಾಣೆ ಕ್ರೈಂ ನಂ: 100/2000, ದಿನಾಂಕ: 19.8.2000 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಪ್ರಕರಣವನ್ನು ಮುಂದಿನ ಕ್ರಮದ ಬಗ್ಗೆ ಅಬಕಾರಿ ಉಪ ನಿರೀಕ್ಷಕರು ಪೊನ್ನಂಪೇಟೆ ಉಪ ವಲಯ ರವರಿಗೆ ವಶಪಡಿಸಿಕೊಂಡ ವಸ್ತು ಮತ್ತು ಜೀಪನ್ನು ಹಸ್ತಾಂತರಿಸಿರುತ್ತಾರೆ.

ಸದರಿ ವಾಹನದ ಮಾಲೀಕರು ದಿನಾಂಕ: 31.10.2000 ದಂದು ಈ ಪ್ರಾಧಿಕಾರದ ಮುಂದೆ ತಮ್ಮ ಪರ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ನಾನು ಸದರಿ ವಾಹನದ ಅಧಿಕೃತ ಮಾಲೀಕನಾಗಿದ್ದು, ತಾನು ಈ ಪ್ರಕರಣದಲ್ಲಿ ನಿರಪರಾಧಿ ಆಗಿದ್ದು ಸದರಿ ವಾಹನವನ್ನು ಲೋನ್ ಮೂಲಕ ಖರೀದಿಸಲಾಗಿದ್ದು ಇದರಿಂದ ಬರುವ ಬಾಡಿಗೆಯಿಂದಲೇ ನನ್ನ ಸಂಸಾರವನ್ನು ಸಾಗಿಸಬೇಕಾಗಿದೆ. ವಾಹನವನ್ನು ಚಾಲನೆಯ ಸ್ಥಿತಿಯಲ್ಲಿಲ್ಲದೆ ನಿಲ್ಲಿಸಿದಲ್ಲಿ ಅದರಿಂದ ತುಂಬಾ ನಷ್ಟ ಉಂಟಾಗುತ್ತದೆ ಎಂದು ವಾಹನವನ್ನು ಮಧ್ಯಂತರ ಬಿಡುಗಡೆಗೆ ಕೋರಿರುವುದು ಸರಿಯಷ್ಟೆ.

ಸದರಿಯವರ ಕೋರಿಕೆಯನ್ನು ಪರಿಗಣಿಸಿ ಈ ಪ್ರಾಧಿಕಾರ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಯವರಿಗೆ ಪತ್ರ ಬರೆದು ವಾಹನದ ಮಾರ್ಕೆಟ್ ಮೌಲ್ಯ ನಿಗದಿಪಡಿಸುವಂತೆ ಕೋರಿಕೊಂಡ ಮೇರೆಗೆ ಸದರಿಯವರು ವಾಹನವನ್ನು ಪರಿಶೀಲಿಸಿ ರೂ. 40,000/- (ರೂ.ನಲ್ವತ್ತು ಸಾವಿರ) ಮೌಲ್ಯವನ್ನು ನಿಗದಿಪಡಿಸಿದ್ದು, ಸದರಿ ವಾಹನಕ್ಕೆ ಈ ಪ್ರಾಧಿಕಾರವು ಒಂದು ಲಕ್ಷ ಮೌಲ್ಯವನ್ನು ನಿಗದಿಪಡಿಸಿ, ರೂ. 40,000/- ದ ಬ್ಯಾಂಕ್ ಗ್ಯಾರಂಟಿಯನ್ನು ಮತ್ತು ಉಳಿದ ರೂ. 60,000/- ಕ್ಕೆ ಸ್ಥಿರಾಸ್ತಿಯುಳ್ಳ ಒಬ್ಬನ ಜಾಮೀನು ನೀಡುವಂತೆ ದಿನಾಂಕ: 14.2.01 ರಂದು ಕೆಲವು ಷರತ್ತುಗಳನ್ನೊಳಗೊಂಡ ಆದೇಶವನ್ನು ತಯಾರಿಸಲಾಗಿತ್ತು. ಸದರಿ ವಾಹನದ ಮಾಲೀಕರು ತದನಂತರ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಆದೇಶದಂತೆ ವಾಹನವನ್ನು ತಾತ್ಕಾಲಿಕವಾಗಿ ತಮ್ಮ ವಶದಲ್ಲಿ ತೆಗೆದುಕೊಳ್ಳಲು ವಿಫಲರಾಗಿರುತ್ತಾರೆ. ಆದುದರಿಂದ ವಾಹನವು ಈ ವರೆಗೂ ಇಲಾಖೆಯ ವಶದಲ್ಲಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿ ಪ್ಯಾಕೇಟುಗಳನ್ನು ಮತ್ತು ಮದ್ಯಸಾರವನ್ನು ರಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಕಳಿಸಲಾಗಿದ್ದು ತಜ್ಞರ ವರದಿಯ ಪ್ರಕಾರ ಮಾನವ ಸೇವನೆಗೆ ಯೋಗ್ಯವಲ್ಲದ ಸಾರಾಯಿಯನ್ನು ಮತ್ತು ಮಾನವ ಸೇವನೆಗೆ ಯೋಗ್ಯವಿರುವ ಮದ್ಯಸಾರವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿರುತ್ತದೆ.

ದಿನಾಂಕ: 14.2.2000 ರಿಂದ ಇಂದಿನವರೆಗೆ ಈ ಪ್ರಾಧಿಕಾರದಲ್ಲಿ ನಡೆಯಲಾದ ನ್ಯಾಯಾಲಯದ ವಿಚಾರಣೆಗೆ ಹಾಜರಾಗುವಂತೆ ಅರ್ಜಿಸಲ್ಲಿಸಿದ ವಾಹನದ ಮಾಲೀಕರಾದ ಶ್ರೀ ಎ. ಕೆ. ಇಕ್ಬಾಲ್, ತಂದೆ ಉಮ್ಮರ್, ಗಾಂಧಿನಗರ, ವಿರಾಜಪೇಟೆ ಇವರಿಗೆ ನೋಟಿಸ್ ನೀಡಿದರೂ ಸಹ ನೋಟಿಸ್ ವಾಪಸ್ ಬಂದಿರುತ್ತದೆ. ಮತ್ತು ನೋಂದಣಿ ಅಂಚೆಯ ಮೂಲಕ ಹಲವಾರು ಸಮನ್ಸ್ ನೀಡಿದರೂ ಸಹ ವಾಪಸ್ ಬಂದಿರುತ್ತದೆ.

ಹಾಗೂ ಕೊನೆಯದಾಗಿ ಸದರಿ ವಾಹನಕ್ಕೆ ಸಂಬಂಧಪಟ್ಟವರು ಯಾರಾದರೂ ಇದ್ದಲ್ಲಿ ಈ ಪ್ರಾಧಿಕಾರಕ್ಕೆ ಬರಲು ತಿಳಿಯಪಡಿಸಲು ಕರ್ನಾಟಕ ರಾಜ್ಯ ಪತ್ರಕ್ಕೆ ಪ್ರಕಟಿಸುವಂತೆ ಮತ್ತು ಪ್ರಕಟಣೆಯಾದ 30 ದಿವಸಗಳೊಳಗೆ ಸದರಿ ವಾಹನಕ್ಕೆ ಸಂಬಂಧಪಟ್ಟವರಿದ್ದರೆ ಈ ಪ್ರಾಧಿಕಾರದ ಮುಂದೆ ಬರಬೇಕಾಗಿ ಕೋರಿ ಪ್ರಕಟಿಸಲಾಗಿತ್ತು. 30 ದಿವಸಗಳೊಳಗಾಗಿ ವಾಹನಕ್ಕೆ ಸಂಬಂಧಪಟ್ಟವರು ಬಾರದಿದ್ದಲ್ಲಿ ಇನ್ನು

ಯಾವುದೇ ಸೂಚನೆ ನೀಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಆದರೆ 40 ದಿವಸಗಳು ಕಳೆದರೂ ಸಹ ಸದರಿ ವಾಹನಕ್ಕೆ ಸಂಬಂಧಪಟ್ಟವರಾರೂ ಈ ಪ್ರಾಧಿಕಾರಕ್ಕೆ ಬಾರದ ಕಾರಣ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನ ಸಂ: ಕೆಎ-02-2373 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದ ಕಾರಣ ಸದರಿ ವಾಹನವು ದಿನಾಂಕ: 19.6.2000 ರಂದು 700 ಲೀಟರ್ ಮದ್ಯಸಾರ ಮತ್ತು 200 ಲೀಟರ್ ಸಾರಾಯಿಯನ್ನು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ತಜ್ಞರ ವರದಿಯಿಂದ ವಶಪಡಿಸಿಕೊಂಡಿರುವ ದಾಸ್ತಾನನ್ನು ಮದ್ಯಸಾರ ಮತ್ತು ಸಾರಾಯಿ ಎಂದು ಸಾಬೀತಾಗಿ ಹಾಗೂ ವಾಹನದ ಮಾಲೀಕರು ವಾಹನ ಪಡೆಯಲು ಮುಂದೆ ಬಾರದ ಕಾರಣ ಸ್ಪಷ್ಟವಾಗಿ ಸದರಿ ವಾಹನವು ಅಬಕಾರಿ ಕಾಯಿದೆ ಉಲ್ಲಂಘನೆಯಲ್ಲಿ ತೊಡಗಿರುವುದು ಸಾಬೀತಾಗುತ್ತದೆ. ಹಾಗೂ ವಾಹನ ವಶಪಡಿಸಿಕೊಂಡು ಸುಮಾರು 3 ವರ್ಷ ಕಳೆದಿದ್ದು ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದರಿಂದ ಹವಾಮಾನದ ವಿಕೋಪಕ್ಕೆ ಅದರ ಬಿಡಿಭಾಗಗಳು ತುಕ್ಕುಹಿಡಿದು ಯಾವುದೇ ಪ್ರಯೋಜನಕ್ಕೆ ಬಾರದ ಸ್ಥಿತಿ ತಲುಪಿದೆ. ಆದುದರಿಂದ ಇನ್ನು ಹೆಚ್ಚು ಸಮಯ ಹೀಗೆ ಇದ್ದಲ್ಲಿ ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಗಿನಂತೆ ಆದೇಶ.

**ಆದೇಶ ಸಂ: ಇಎಕ್ಸ್‌ಇ:3:ಸಿಆರ್‌ಎಂ:19/2000-01, ದಿನಾಂಕ: 19ನೇ ಜುಲೈ 2004**

ಈ ಪ್ರಕರಣದಲ್ಲಿನ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಗೋಣಿಕೊಪ್ಪ ಆರಕ್ಷಕ ಉಪ ನಿರೀಕ್ಷಕರ ಮೊಕದ್ದಮೆ ಸಂ:100/2000, ದಿನಾಂಕ: 19.8.2000ರಲ್ಲಿ ಸ್ವಾಧೀನಪಡಿಸಿಕೊಂಡ ಜೀಪು ನಂ. ಕೆಎ-02-2373 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 19.7.2004 ರಂದು ಉಕ್ತಲೇಖನ ಕೊಟ್ಟು ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 1122 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ ಮಡಿಕೇರಿ.

**ಅಬಕಾರಿ ಇಲಾಖೆ**

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ**

**ಪ್ರಕಟಣೆ ನಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:205/2003-04 ದಿನಾಂಕ: 28ನೇ ಜುಲೈ 2004**

**ವಿಷಯ :** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳ ವಿಲೇವಾರಿ ಬಗ್ಗೆ ಸರ್ಕಾರಿ ಪತ್ರದಲ್ಲಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** 1. ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಾಹನ ಸಂಖ್ಯೆ: ಅಂಬಾಸಿಡರ್ ಕಾರ್ ಕೆ.ಎ.25-360.

ಉಲ್ಲೇಖದಲ್ಲಿ ಹೇಳಲಾದ ವಾಹನ ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ, ಮದ್ಯ ಸಾರ, ಸ್ವದೇಶಿ ಮದ್ಯಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಈ ಕೆಳಕಂಡ ವಾಹನದ ಮೇಲೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

ಆರಕ್ಷಕ ವೃತ್ತ ನಿರೀಕ್ಷಕರು, ಗೋಣಿಕೊಪ್ಪ ಠಾಣೆ ರವರ ಮೊಕದ್ದಮೆ ಸಂ:105/2000 ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ಕೆ.ಎ.25-360

ಸದರಿ ವಾಹನದ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965 ರ ಕಲಂ 43 (ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲಿಕರ ಮಾಹಿತಿ ಬೇಕಾಗಿರುತ್ತದೆ. ಈವರೆಗೆ ಸಂಬಂಧಪಟ್ಟವರು ಈ ಪ್ರಾಧಿಕಾರಕ್ಕೆ ಬಂದು ಅರ್ಜಿ ಸಲ್ಲಿಸಿರುವುದಿಲ್ಲ ಹಾಗೂ ಸದರಿ ವಾಹನಗಳ "ಬಿ" ಎಕ್ಸ್ಟ್ರಾಕ್ಟ್ ದೊರೆಯುತ್ತಿಲ್ಲ.

ಆದುದರಿಂದ ಸದರಿ ವಾಹನದ ಮಾಲಿಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸಿದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಪ್ರಕಾರ ನೇರವಾಗಿ ಸದರಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 1123 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**

**ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ:ಸಿಓಎನ್:ಸಿಆರ್:33/2001-02 ದಿನಾಂಕ: 28ನೇ ಜುಲೈ 2004**

**ನಿರೂಪಣಾಧಿಕಾರಿಗಳು:** ಶ್ರೀಮತಿ ಸೀಮಾಗರ್ಗ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

| **ಫಿರ್ಯಾದುದಾರರು** | **ವಿರುದ್ಧ** | **ಅರ್ಜಿದಾರರು:** |
|---|---|---|
| 1. ವಲಯ ಅರಣ್ಯಾಧಿಕಾರಿ, ಉಂಬ್ಲೆಬೈಲು ವಲಯ, ಉಂಬ್ಲೆಬೈಲು | | 1. ಶ್ರೀ ಎಂ. ಅಬ್ದುಲ್ ವಹಾಬ್ ಬಿನ್ ಕೆ. ಎಸ್. ಮಹಮದ್ ಹನೀಫ್, ಉಮ್ಮರ್ ನಗರ, 4ನೇ ಕ್ರಾಸ್, ನಾಗ್‌ವಾರ್, ಬೆಂಗಳೂರು-45 |

**ಪ್ರಸ್ತಾವನೆ:**

ವಲಯ ಅರಣ್ಯಾಧಿಕಾರಿ, ಉಂಬ್ಲೆಬೈಲು ವಲಯ ಮತ್ತು ಸಿಬ್ಬಂದಿಯವರು ದಿನಾಂಕ: 27.3.2002 ರಂದು ಎನ್.ಆರ್.ಪುರ ತಾಲ್ಲೂಕು, ಮುತ್ತಿನಕೊಪ್ಪ ಹೋಬಳಿ, ಉಂಬ್ಲೆಬೈಲು ವಲಯದ ಅಲ್ದಾರ ಶಾಖೆಯ ಹುಣಸೇಕಟ್ಟೆ ಬೀಟಿನ ವ್ಯಾಪ್ತಿಯಲ್ಲಿ ಬರುವ ಅಲ್ದಾರ ಎಸ್.ಎಫ್.ನ. ಪಕ್ಕ ಜೇಡಿಕಟ್ಟೆ ಗ್ರಾಮದ ವಿಜಯೇಂದ್ರ ಇವರ ಹತ್ತಿ ಹೊಲದ ಬಳಿ ಬರುವಾಗ ಒಂದು ಲಾರಿ ಬರುವುದನ್ನು ಕಂಡು ಚಾಲಕನಿಗೆ ನಿಲ್ಲಿಸಲು ಸೂಚಿಸಿದಾಗ, ಚಾಲಕನು ಸಿಬ್ಬಂದಿಯವರನ್ನು ದೂರದಿಂದಲೇ ನೋಡಿ ವಾಹನವನ್ನು ನಿಲ್ಲಿಸಿ ಪರಾರಿಯಾಗಿರುತ್ತಾನೆ. ಆಸಾಮಿಗಳು ಕತ್ತಲಾದ್ದರಿಂದ ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ನಂತರ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ನಂ: ಓಎಸ್‌ಯು 2540 ಆಗಿರುತ್ತದೆ. ಲಾರಿಯ ಒಳಭಾಗದಲ್ಲಿ ಸಾಗುವಾನಿ ಮತ್ತು ಬೀಟೆ ತುಂಡುಗಳು ತುಂಬಿದ್ದು ಸದರಿ ತುಂಡುಗಳಿಗೆ ಯಾವುದೇ ಛಾಪ ಗುರುತು ಕಂಡು ಬಾರದೇ ಇದ್ದು, ಸದರಿ ತುಂಡುಗಳು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದಾಗಿ ಖಚಿತಪಡಿಸಿಕೊಂಡು ಅವುಗಳನ್ನು ವಶಪಡಿಸಿಕೊಂಡು ಎಣಿಕೆ ಮಾಡಿ ಅಳತೆ ಮಾಡಿದಾಗ ಸಾಗುವಾನಿ 10 ತುಂಡುಗಳು, ಬೀಟೆ 3 ತುಂಡುಗಳು, ಒಟ್ಟು 13=2.205 ಎಂ 3 ಇದ್ದು, ಅವುಗಳಿಗೆ ಕ್ರಮ ಸಂಖ್ಯೆ ನೀಡಿ ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 212/01-02ನ್ನು ದಾಖಲು ಮಾಡಿ ಅಮಾನತ್ತುಪಡಿಸಿಕೊಳ್ಳಲಾಯಿತು. ಈ ಬಗ್ಗೆ ಮೇಲ್ಕಂಡ ಪ್ರಕರಣದ ಪೂರಾ ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸಲು ಕೋರಿರುತ್ತಾರೆ. ಸದರಿ ತುಂಡುಗಳು ಹಾಗೂ ವಾಹನವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ಉಂಬ್ಲೆಬೈಲು ರವರ ವಶಕ್ಕೆ ನೀಡಲಾಗಿದೆ.

ದಿನಾಂಕ: 16.4.2002 ರಂದು ಶ್ರೀ ಎಂ. ಅಬ್ದುಲ್ ವಹಾಬ್ ಬಿನ್ ಕೆ. ಎಸ್. ಮಹಮದ್ ಹನೀಫ್, ಬೆಂಗಳೂರು ಇವರು ಲಾರಿ ನಂ. ಓಎಸ್‌ಯು 2540 ರ ಮಾಲೀಕನಾಗಿರುತ್ತೇನೆ. ಸದರಿ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ಸದರಿ ವಾಹನದಿಂದಲೇ ಜೀವನೋಪಾಯ ಸಾಗುತ್ತಿದ್ದು, ವಾಹನವನ್ನು ಕಚೇರಿ ಬಯಲಿನಲ್ಲಿಟ್ಟಿರುವುದರಿಂದ ಬಿಸಿಲು ಮಳೆಗೆ ಸಿಕ್ಕಿ ಹಾಳಾಗುವ ಸಾಧ್ಯತೆಯಿರುತ್ತದೆ. ಅಲ್ಲದೇ ಚಲಿಸದೆ ತಟಸ್ಥವಾಗಿರುವುದರಿಂದ ಮುಂದೆ ಉಪಯೋಗಕ್ಕೆ ಬಾರದಂತೆ ಆಗುತ್ತದೆ. ಮಾನ್ಯ ನ್ಯಾಯಾಲಯವು ಸೂಕ್ತ ದಂಡ ವಿಧಿಸಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ.

ದಿನಾಂಕ: 23.4.2002 ರಂದು ಈ ನ್ಯಾಯಾಲಯದಿಂದ ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿ ಸಮಜಾಯಿಸಿ ಕೇಳಿರುತ್ತದೆ. ಅರ್ಜಿದಾರರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಸಮಜಾಯಿಸಿ ನೀಡಿರುತ್ತಾರೆ. ಅವರ ಸಮಜಾಯಿಸಿ ಪ್ರಕಾರ ದಿನಾಂಕ: 27.3.2002 ರಂದು ಅರಣ್ಯ ಅಪರಾಧದಲ್ಲಿ ವಾಹನವನ್ನು ಅಮಾನತ್ತುಪಡಿಸಿರುವುದು ಸುಳ್ಳಾಗಿರುತ್ತದೆ. ಯಾವುದೇ ಅರಣ್ಯ ಉತ್ಪನ್ನ ವಾಹನದಲ್ಲಿ ಸಾಗಾಣಿಕೆ ಆಗಿರುವುದಿಲ್ಲ. ದಿನಾಂಕ: 25.3.2002 ರಂದು ವಾಹನದ ಚಾಲಕ ರಾಮಚಂದ್ರ ಇವನು ಸೈಜುಕಲ್ಲುಗಳನ್ನು ಬೀರೂರು ಕ್ರಾಸ್‌ನಿಂದ ಕಾರೇಹಳ್ಳಿಗೆ ಸಾಗಾಣಿಕೆ ಮಾಡಿ ದಿನಾಂಕ: 26.3.2002 ರಂದು ಕಾರೇಹಳ್ಳಿಯಲ್ಲಿ ಸೈಜುಕಲ್ಲುಗಳನ್ನು ತಂದು ಹಾಕಿರುತ್ತಾರೆ. ನಂತರ ಲಾರಿಯನ್ನು ತಂಗಿಯ ಮನೆ ಹತ್ತಿರ ನಿಲ್ಲಿಸಿರುತ್ತಾರೆ. ಆ ಸಮಯದಲ್ಲಿ ರಾಮಚಂದ್ರ ಚಾಲಕನಿಗೆ ಆರೋಗ್ಯ ಸರಿಯಿರುವುದಿಲ್ಲ. ವಾಹನದ ಮಾಲೀಕರಿಗೆ ಬೆಂಗಳೂರಿನಿಂದ ದೂರವಾಣಿ ಸಂದೇಶ ಬಂದಿದ್ದು, ವಾಹನದ ಮಾಲೀಕರು ಬೆಂಗಳೂರಿಗೆ ಹೋಗುವ ಸಮಯದಲ್ಲಿ ರಾಮಚಂದ್ರ ಚಾಲಕನಿಗೆ ಲಾರಿಯಲ್ಲಿ ಬೊಂಬು ಲೋಡನ್ನು ಎನ್. ಆರ್. ಪುರದಿಂದ ದೊಡ್ಡಬಳ್ಳಾಪುರಕ್ಕೆ ತೆಗೆದು ಹೋಗಲು ತಿಳಿಸಿ ಹೋಗಿರುತ್ತಾರೆ. ಆ ಸಮಯದಲ್ಲಿ ರಾಮಚಂದ್ರ ಚಾಲಕನಿಗೆ ಆರೋಗ್ಯ ಸರಿಯಿಲ್ಲದ ಕಾರಣ, ರಹಮತುಲ್ಲ, ಲಿಂಗದಹಳ್ಳಿ ವಾಸಿ ಚಾಲಕನನ್ನು ಗೊತ್ತುಪಡಿಸಿ ಬೊಂಬು ಲೋಡನ್ನು ಮಾಡಿಕೊಂಡು ಬರಲು ತಿಳಿಸಿ, ಲಾರಿಯನ್ನು ಕೊಟ್ಟಿರುತ್ತಾರೆ. ನಂತರ ಲಾರಿಯು ಬೊಂಬು ಲೋಡು ಮಾಡಿಕೊಂಡು ವಾಪಸ್ಸು ಬಂದಿರುವುದಿಲ್ಲ. ನಂತರ ಸ್ನೇಹಿತರ ಮುಖಾಂತರ ಸದರಿ ಲಾರಿಯು ಅರಣ್ಯ ಅಪರಾಧದಲ್ಲಿ ಸಿಲುಕಿ ಉಂಬ್ಲೆಬೈಲು ವಲಯ ಅರಣ್ಯಾಧಿಕಾರಿ ಕಚೇರಿಯಲ್ಲಿ ಇರುವುದಾಗಿ ತಿಳಿದು ಬಂದಿರುತ್ತದೆ. ಸದರಿ ಕೃತ್ಯವು ಯಾವ ರೀತಿ ಆಗಿರುತ್ತದೆ ಎಂಬುದು ನನಗೆ ತಿಳಿಯದು. ದಯಮಾಡಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಈ ಪ್ರಕರಣದ ಮಧ್ಯಂತರ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿ ಅರ್ಜಿದಾರರು ವಕೀಲರ ಮುಖಾಂತರ ಸಲ್ಲಿಸಿದ ಅರ್ಜಿ ಫಿರ್ಯಾದಿದಾರರು ಸಲ್ಲಿಸಿದ ದಾಖಲಾತಿಗಳು ಹಾಗೂ ಅಭಿಯೋಜನಾವತಿಯಿಂದ ಸಲ್ಲಿಸಿದ ಆಕ್ಷೇಪಣಾ ಪತ್ರವನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಸಂಪೂರ್ಣ ವಿಚಾರಣೆ ಅತ್ಯವಶ್ಯಕವಾಗಿದೆ ಎಂದು ತೀರ್ಮಾನಿಸಿ ವಾಹನದ ಬಿಡುಗಡೆ ಕೋರಿ ಸಲ್ಲಿಸಿದ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ: 13.6.2002 ರಂದು ಆದೇಶ ಹೊರಡಿಸಿರುತ್ತದೆ. ಅರ್ಜಿದಾರರು ಈ ಪ್ರಕರಣದಲ್ಲಿ ಈ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿರುವುದಿಲ್ಲ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ವಿವಿಧ ದಿನಾಂಕಗಳಂದು ಗೊತ್ತುಪಡಿಸಿ ಅಭಿಯೋಜನಾವತಿಯಿಂದ ದಿನಾಂಕ: 19.3.2003 ರಂದು ಶ್ರೀ ಜಿ. ವೇಣುಗೋಪಾಲ, ವಲಯ ಅರಣ್ಯಾಧಿಕಾರಿ, ಉಂಬ್ಲೆಬೈಲು, ಶ್ರೀ ಎಸ್. ಎಸ್. ಹೆಬ್ಬಿ, ವನಪಾಲಕ, ಉಂಬ್ಲೆಬೈಲು ದಿನಾಂಕ: 17.3.2004 ರಂದು ಸ್ವತಂತ್ರ ಸಾಕ್ಷಿದಾರರಾದ ಶ್ರೀ ತಿಮ್ಮಪ್ಪ ಬಿನ್ ರುದ್ರಪ್ಪ, ಜೇಡಿಕಟ್ಟೆ, ಉಂಬ್ಲೆಬೈಲು ಇವರು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರು ಹಾಜರಾಗಿದ್ದು ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿ ಹೇಳಿಕೆ ದಾಖಲಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ-1:-**

ವಾಹನ ಲಾರಿ ಸಂಖ್ಯೆ: ಓಎಸ್‌ಯು 2940 ನ್ನು ದಿನಾಂಕ: 27.3.2002 ರಂದು ಸಾಗುವಾನಿ ಹಾಗೂ ಬೀಟೆ ತುಂಡುಗಳು 13=2.205 ಎಂ3 ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ

**ಅಂಶ-2:-**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾಧವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ಅದರ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂದು ಡಿಫೆನ್ಸ್‌ರವರು ರುಜುವಾತು ಪಡಿಸಿರುವವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಕ್ಷ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತು ಪಡಿಸಿರುತ್ತಾರೆಯೇ?

**ಅಂಶ-3:-**

ಆದೇಶವೇನು

**ಕಾರಣಗಳು**

**ಅಂಶ-1:-**

ವಲಯ ಅರಣ್ಯಾಧಿಕಾರಿಗಳು ಮತ್ತು ಸಿಬ್ಬಂದಿಯವರು ದಿನಾಂಕ: 27.3.2002 ರಂದು ಎನ್.ಆರ್.ಪುರ ತಾಲ್ಲೂಕು, ಮುತ್ತಿನಕೊಪ್ಪ ಹೋಬಳಿ, ಉಂಬ್ಳೆಬೈಲು ವಲಯದ ಅಲ್ದಾರ ಶಾಖೆಯ ಹುಣಸೇಕಟ್ಟೆ ಬೀಟಿನ ವ್ಯಾಪ್ತಿಯಲ್ಲಿ ಬರುವ ಅಲ್ದಾರ ಎಸ್.ಎಫ್.ನ ಪಕ್ಕ ಜೇಡಿಕಟ್ಟೆ ಗ್ರಾಮ ವಿಜಯೇಂದ್ರ ಇವರ ಹತ್ತಿ ಹೊಲದ ಬಳಿ ಅಕ್ರಮವಾಗಿ ಲಾರಿ ಸಂಖ್ಯೆ: ಓಎಸ್‌ಯು 2540 ರಲ್ಲಿ 10 ಸಾಗುವಾನಿ ಮತ್ತು 3 ಬೀಟೆ ತುಂಡುಗಳು ಸಾಗಾಣಿಕೆ ಆಗುತ್ತಿರುವುದನ್ನು ಪತ್ತೆಹಚ್ಚಿ ವಶಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿರುತ್ತಾರೆ. ಈ ಬಗ್ಗೆ ಫಿರ್ಯಾದಿದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಸ್ಥಳ ಮಹಜರ್, ಎಫ್.ಐ.ಆರ್. ಹಾಗೂ ಸೀಜರ್ ರಿಪೋರ್ಟ್ ನಿಂದ ತಿಳಿದುಬಂದಿರುತ್ತದೆ. ಅಲ್ಲದೇ ಈ ಪ್ರಕರಣದ ಮೇಲ್ಕಂಡ ಫಿರ್ಯಾದಿದಾರರು ಮತ್ತು ಸಾಕ್ಷಿದಾರರು ನ್ಯಾಯಾಲಯಕ್ಕೆ ಸಾಕ್ಷಿ ನುಡಿದಿರುತ್ತಾರೆ. ಆ ಸಮಯದಲ್ಲಿ ಸ್ಥಳ ಮಹಜರನ್ನು ನಿಶಾನೆ ಪಿ1 ಮತ್ತು ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಿಕೊಂಡಿರುತ್ತಾರೆ ಮತ್ತು ಸ್ವತಂತ್ರ ಸಾಕ್ಷಿದಾರರು ಪಿ1ಸಿ ಎಂದು ಗುರುತಿಸಿಕೊಂಡಿರುತ್ತಾರೆ. ಪ್ರಕರಣವನ್ನು ನೋಂದಾಯಿಸಿಕೊಂಡ ಬಗ್ಗೆ ದಾಖಲಿಸಿದ ಎಫ್.ಐ.ಆರ್.ನ್ನು ನಿಶಾನೆ ಪಿ2 ಹಾಗೂ ಸಾಕ್ಷಿಯ ಸಹಿಯನ್ನು ಪಿ2ಎ ಎಂದು ಗುರುತಿಸಿಕೊಂಡಿರುತ್ತಾರೆ. ಸೀಜರ್ ರಿಪೋರ್ಟ್‌ನ್ನು ನಿಶಾನೆ ಪಿ3 ಹಾಗೂ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಿಕೊಂಡಿರುತ್ತಾರೆ.

ಅರ್ಜಿದಾರರ/ ವಾಹನದ ಮಾಲೀಕರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಸಹ ಅರಣ್ಯ ಉತ್ಪನ್ನವು ಅಕ್ರಮ ಸಾಗಾಣಿಕೆ ಆಗಿರುವುದನ್ನು ದೃಢಪಡಿಸಿರುತ್ತದೆ ಮತ್ತು ವಾಹನದಲ್ಲಿ ಯಾವುದೇ ಮರದ ತುಂಡುಗಳು ಇರಲಿಲ್ಲ. ಪ್ರಕರಣಕ್ಕೋಸ್ಕರ ಕಚೇರಿಯಲ್ಲಿ ಮಹಜರನ್ನು ದಾಖಲಿಸಿ ಸುಳ್ಳು ಕೇಸನ್ನು ಸೃಷ್ಟಿಸಿರುತ್ತೀರಾ ಎಂದು ಹೇಳುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಅಭಿಯೋಜನಾವತಿಯಿಂದ ಸಾಕ್ಷಿದಾರರು ನೀಡಿದ ಹೇಳಿಕೆಗಳು ಹಾಗೂ ಸ್ಥಳ ಮಹಜರ್, ಎಫ್.ಐ.ಆರ್. ಹಾಗೂ ಸೀಜರ್ ರಿಪೋರ್ಟ್ ಸಲ್ಲಿಸಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು, ವಾಹನ ಲಾರಿ ಸಂಖ್ಯೆ: ಓಎಸ್‌ಯು 2540ನ್ನು ದಿನಾಂಕ: 27.3.2002 ರಂದು ಸಾಗುವಾನಿ. ಬೀಟೆ ತುಂಡುಗಳು 13=2.205 ಎಂ3 ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿ ರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 104(ಅ) ಮತ್ತು 71ಎ ಆಫ್ ಕೆ.ಎಫ್.ಎ. 1969 ರೂಲ್ 144 ಮತ್ತು 145 ಉಲ್ಲಂಘನೆ ಆಗಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಆದ್ದರಿಂದ ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2:-**

ಅರ್ಜಿದಾರರ/ವಾಹನದ ಮಾಲೀಕರ ಪರವಾಗಿ ಅವರ ನ್ಯಾಯವಾದಿಗಳು ವಾಹನವನ್ನು ಬಿಡುಗಡೆ ಕೋರಿ ದಿನಾಂಕ: 16.4.2002 ರಂದು ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 71(ಬಿ) ಪ್ರಕಾರ ದಿನಾಂಕ: 23.4.02 ರಂದು ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ಅವರ ವಕೀಲರ ಮುಖಾಂತರ ದಿನಾಂಕ: 23.4.2002 ರಂದು ಸಮಜಾಯಿಸಿ ನೀಡಿದ್ದು, ಸದರಿ ವಾಹನವನ್ನು ವಾಹನ ಚಾಲಕನ ಸಂಗಡ ಬಾಡಿಗೆಗೆ ಕಳುಹಿಸಿದ್ದು, ಸದರಿ ಚಾಲಕನ ಆರೋಗ್ಯ ಸರಿಯಿಲ್ಲದೇ ಬೇರೊಬ್ಬ ವಾಹನ ಚಾಲಕನ ಸಂಗಡ ವಾಹನ ಬಾಡಿಗೆಗೆ ಕಳುಹಿಸಿದಾಗ ವಾಹನವು ವಾಪಸು ಬಂದಿರುವುದಿಲ್ಲ. ಈ ಕೃತ್ಯ ಹೇಗೆ ಆಯಿತು ಎಂಬುದು ತಿಳಿದಿರುವುದಿಲ್ಲ ಈ ಬಗ್ಗೆ ನನಗೆ ಯಾವುದೇ ವಿಚಾರ ಗೊತ್ತಿಲ್ಲ. ನಾನು ನಿರಪರಾಧಿ, ವಾಹನವನ್ನು ಬಿಡುಗಡೆ ಮಾಡಬೇಕಾಗಿ ಸಮಜಾಯಿಸಿ ನೀಡಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ವಿಚಾರಣೆ ನಡೆಸಿದಾಗ ನ್ಯಾಯಾಲಯದಲ್ಲಿ ವಿಚಾರಣೆಗೆ ಹಾಜರಾಗಲು ದಿನಾಂಕ: 19.3.2003, 2.7.2003, 20.8.03, 8.10.2003, 21.1.2004 17.3.2004 ಹಾಗೂ 16.6.2004 ರಂದು ನೋಟೀಸ್ ಜಾರಿ ಮಾಡಿದ್ದರೂ ಸಹ ನ್ಯಾಯಾಲಯಕ್ಕೆ ಹಾಜರಾಗದೇ ಗೈರುಹಾಜರಾಗಿರುತ್ತಾರೆ. ಅರ್ಜಿದಾರರ ಪರ ವಕೀಲರು ನ್ಯಾಯಾಲಯಕ್ಕೆ ಹಾಜರಾಗಿದ್ದು, ವಾಹನವು ಅರಣ್ಯ ಅಪರಾಧದಲ್ಲಿ ಭಾಗಿ ಆಗಿಲ್ಲದೇ ಇರುವ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ. ಅಲ್ಲದೇ ವಾಹನವು ಅರ್ಜಿದಾರರದೇ ಎಂಬ ಬಗ್ಗೆ ವಾಹನದ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ.

ಈ ಪ್ರಕರಣದಲ್ಲಿ ಅರ್ಜಿದಾರರ ಪರ ವಕೀಲರಿಗೆ ವಾಹನಕ್ಕೆ ಸಂಬಂಧಿಸಿದ ವಾರಸುದಾರರನ್ನು ಹಾಜರುಪಡಿಸಲು ಹಾಗೂ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸಲು ಸೂಚಿಸಿದರೂ ಸಹ ಪದೇ ಪದೇ ಸಮಯಾವಕಾಶ ಕೋರಿರುತ್ತಾರೆ ವಿನಃ ಯಾವ ಸಾಕ್ಷಿಗಳನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಅವರ ಕೋರಿಕೆಯನ್ನು ತಿರಸ್ಕರಿಸಿರುತ್ತದೆ.

ಅರ್ಜಿದಾರರು ಲಾರಿ ಸಂಖ್ಯೆ: ಓಎಸ್‌ಯು 2540 ನ್ನು ಸರ್ಕಾರದ ಸೊತ್ತಾದ ಸಾಗುವಾನಿ, ಬೀಟೆ ಮರಗಳನ್ನು ಕಡಿದು ತುಂಡುಗಳಾಗಿ ಪರಿವರ್ತಿಸಿ 13=2.205 ಎಂ3 ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನ ಮಾಲೀಕರು ಪ್ರತ್ಯಕ್ಷವಾಗಿ ಭಾಗಿಯಾಗಿದ್ದರೆಂಬುದು ಸಾಕ್ಷ್ಯಾಧಾರಗಳಿಂದ ರುಜುವಾತಾಗಿರುತ್ತದೆ. ವಾಹನದ ಮಾಲೀಕರಾಗಲೀ ಅಥವಾ ವಾಹನದ ಮಾಲೀಕರು ನೇಮಿಸಿದ ಏಜೆಂಟರಾಗಲೀ ಅಥವಾ ವಾಹನ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ವ್ಯಕ್ತಿಯಾಗಲೀ ಈ ಕೃತ್ಯದಲ್ಲಿ ಭಾಗಿಯಾಗಿಲ್ಲ ಹಾಗೂ ತಮ್ಮ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆ ಎಂಬುದನ್ನು ಹಾಗೂ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇನೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಾಧಿಕಾರದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ಲಾರಿಯನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ.

ಈ ಪ್ರಕರಣದಲ್ಲಿ ಅರ್ಜಿದಾರರು/ ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿದ್ದರೂ ಸಹ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ಅಲ್ಲದೇ ಅವರ ಪರ ವಕೀಲರು ಸಹ ಈ ನ್ಯಾಯಾಲಯದಿಂದ ಸಾಕಷ್ಟು ಸಮಯಾವಕಾಶ ಕೊಟ್ಟರೂ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಮೇಲೆ ಹೇಳಲಾದ ವಾಹನವನ್ನು ನೇರವಾಗಿ ಅರಣ್ಯ ಉತ್ಪನ್ನ ಅಕ್ರಮ ಕಳ್ಳ ಸಾಗಾಣಿಕೆಗೆ ಬಳಸಿರುವುದು ಈ ಪ್ರಕರಣದ ವಿಚಾರಣೆಯಿಂದ ಹಾಗೂ ದಾಖಲಾತಿಗಳ ಪರಿಶೀಲನೆಯಿಂದ ದೃಢಪಟ್ಟಿರುತ್ತದೆ. ಆದ್ದರಿಂದ ಅಂಶ-2ನ್ನು ಇಲ್ಲ ಎಂದು ಪರಿಗಣಿಸಲಾಯಿತು.

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅಂಶ-3ಕ್ಕೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಅಂತಿಮ ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯ್ದೆ 1963ರ ಸೆಕ್ಷನ್-71-ಎ (2)ನೇ ತಿದ್ದುಪಡಿ ಪ್ರಕಾರ ಲಾರಿ ನೋಂದಾವಣೆ ಸಂಖ್ಯೆ: ಓಎಸ್‌ಯು-2540-ನ್ನು (ಇಂಜಿನ್ ನಂ:3120111701 ಛಾಸ್ಸಿ ನಂ:344052097314) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಸಾಗುವಾನಿ ಬೀಟೆ ತುಂಡುಗಳು 13=2.205 ಎಂ3 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಸಾಗುವಾನಿ ಹಾಗೂ ಬೀಟೆ ತುಂಡುಗಳನ್ನು ಕಾನೂನು ರೀತ್ಯ ವಿಲೇ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 28.7.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತದೆ.

**ಅನುಬಂಧ**

**ಫಿರ್ಯಾದಿದಾರರ ಸಾಕ್ಷಿಗಳ ವಿಚಾರಣೆ**

ಎ) ಪಿಡಬ್ಲ್ಯು 1: ಜಿ ವೇಣುಗೋಪಾಲ್ ವಲಯ ಅರಣ್ಯಾಧಿಕಾರಿ ಉಂಬ್ಳೆಬೈಲು ವಲಯ

ಬಿ) ಪಿಡಬ್ಲ್ಯು 2: ಎಸ್‌ಎಸ್ ಹೆಬ್ಬಿ ವನಪಾಲಕರು ಉಂಬ್ಳೆಬೈಲು ವಲಯ

ಸಿ) ಪಿಡಬ್ಲ್ಯು 3: ತಿಮ್ಮಪ್ಪ ಬಿನ್ ರುದ್ರಪ್ಪ ಚೌಡಿಕಟ್ಟೆ ಉಂಬ್ಳೆಬೈಲು

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ:**

1) ಪಿ1 ಸ್ಥಳ ಮಹಜರ್
2) ಪಿ1ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ
3) ಪಿ1ಬಿ ಪಿಡಬ್ಲ್ಯೂ 2 ಸಾಕ್ಷಿದಾರರ ಸಹಿ
4) ಪಿ1ಸಿ. ಪಿಡಬ್ಲ್ಯೂ 3 ಸಾಕ್ಷಿದಾರರ ಸಹಿ
5) ಪಿ2 ಪ್ರಥಮ ಮಾಹಿತಿ ವರದಿ
6) ಪಿ2 ಎ ಫಿರ್ಯಾದಿದಾರರ ಸಹಿ
7) ಪಿ3 ಸೀಜರ್ ರಿಪೋರ್ಟ್
8) ಪಿ3ಎ ಫಿರ್ಯಾದಿದಾರರ ಸಹಿ

**ಎಕ್ಸ್‌ಬಿಟ್-1**

ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ

**ಎಕ್ಸ್‌ಬಿಟ್-2**

ಮಧ್ಯಂತರ ಅರ್ಜಿಯ ಬಗ್ಗೆ ಆದೇಶ ದಿನಾಂಕ: 13.6.2002

**ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ:**

ಯಾವುದು ಇರುವುದಿಲ್ಲ

**ಸೀಮಾ ಗರ್ಗ್**

ಪಿ.ಆರ್.1124 ಅಧಿಕಾರಿಯತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**DIRECTORATE OF ECONOMICS AND STATISTICS,**
**GOVERNMENT OF KARNATAKA, BANGALORE-1.**
**Consumer Price Index Numbers for Industrial Workers**

No. DES 24 PWX 2004 Month: MAY 2004
State: Karnataka Base: 1987-88=100 Date : 22-07-2004

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Mysore | Rai chur | Tum kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:**<br>(a) Cereals & Products | 334 | 414 | 374 | 350 | 343 | 327 | 357 | 308 | 273 | 376 | 327 | 367 |
| | (b) Pulses & Products | 273 | 298 | 301 | 330 | 284 | 278 | 301 | 300 | 273 | 292 | 298 | 302 |
| | (c) Oils & Fats | 260 | 260 | 255 | 265 | 284 | 262 | 288 | 302 | 260 | 276 | 267 | 263 |
| | (d) Meat, Fish & Eggs | 342 | 328 | 365 | 458 | 325 | 341 | 309 | 346 | 554 | 357 | 385 | 323 |
| | (e) Milk & Products | 342 | 225 | 315 | 313 | 303 | 267 | 252 | 341 | 289 | 257 | 307 | 281 |
| | (f) Condiments & Spices | 221 | 309 | 346 | 406 | 283 | 280 | 261 | 224 | 219 | 270 | 249 | 305 |
| | (g) Vegetables & Fruits | 250 | 323 | 331 | 367 | 298 | 280 | 315 | 333 | 266 | 289 | 198 | 512 |
| | (h) Other Food | 281 | 367 | 349 | 342 | 282 | 300 | 298 | 291 | 314 | 288 | 302 | 316 |
| | **FOOD GROUP** | 301 | 342 | 343 | 349 | 310 | 298 | 311 | 309 | 324 | 312 | 305 | 339 |
| II. | Pan, Supari, Tobacco & Intoxicants | 304 | 350 | 371 | 344 | 388 | 430 | 352 | 467 | 295 | 324 | 352 | 387 |
| III. | Fuel & Light | 296 | 308 | 269 | 446 | 278 | 314 | 344 | 329 | 270 | 298 | 363 | 291 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 225 | 373 | 284 | 235 | 323 | 381 | 242 | 292 | 402 | 209 |
| VI. | **MISCELLANEOUS:**<br>(a) Medical Care | 566 | 466 | 370 | 293 | 282 | 267 | 404 | 332 | 336 | 295 | 394 | 219 |
| | (b) Education, Recreation & Amusement | 336 | 311 | 521 | 204 | 388 | 385 | 323 | 319 | 328 | 421 | 370 | 368 |
| | (c) Transport & Communication | 348 | 386 | 327 | 333 | 595 | 344 | 347 | 558 | 347 | 408 | 388 | 363 |
| | (d) Personal Care & effects | 264 | 276 | 257 | 284 | 296 | 256 | 272 | 296 | 267 | 312 | 258 | 269 |
| | (e) Others | 320 | 339 | 282 | 422 | 287 | 248 | 283 | 282 | 238 | 297 | 402 | 246 |
| | Miscellaneous Group Index | 360 | 329 | 333 | 306 | 342 | 291 | 315 | 314 | 293 | 352 | 351 | 282 |
| | **GENERAL INDEX** | 284 | 301 | 297 | 327 | 287 | 271 | 293 | 299 | 286 | 284 | 306 | 274 |
| | To convert to Base 1960 Multiply by Linking Factor. | 7.39 | 9.19 | 8.27 | … | 8.26 | 8.56 | 9.25 | 7.92 | 9.31 | 9.05 | … | … |

For Director ,
Joint Director,
Directorate of Economics and Statistics,
Government of Karnataka, Bangalore.

**Government of India,**
**Ministry of Labour (Labour Bureau)**
**No. 112/1(KTK)/2001-FLS**

'Cleremount' Shimla-171004

**CONSUMER PRICE INDEX NUMBERS FOR INDUSTRIAL WORKERS (BASE-1982=100)**

State: Karnataka Month: May, 2004

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I. A:FOOD:** | | | | |
| 1100 | (a) Cereals & Products | 436 | 540 | 467 | 452 |
| 1200 | (b) Pulses & Products | 534 | 490 | 524 | 546 |
| 1300 | (c) Oils & Fats | 424 | 395 | 395 | 433 |
| 1400 | (d) Meat, Fish & Eggs | 628 | 571 | 553 | 571 |
| 1500 | (e) Milk & Products | 375 | 531 | 440 | 459 |
| 1600 | (f) Condiments & Spices | 473 | 581 | 578 | 447 |
| 1700 | (g) Vegetables & Fruits | 534 | 490 | 617 | 473 |
| 1800 | (h) Other Food | 695 | 722 | 691 | 762 |
| 1000 | **I-A FOOD GROUP** | 511 | 560 | 529 | 524 |

| | 1 | 2 | 3 | 4 | 5 |
|---|---|---|---|---|---|
| 2000 | I-Pan, Supari, Tobacco & Intoxicants | 659 | 634 | 597 | 531 |
| 3000 | II-Fuel & Light | 764 | 639 | 558 | 462 |
| 4000 | III-Housing Index | 551 | 664 | 496 | 195 |
| 5000 | IV-Clothing, Bedding & Footwear | 270 | 278 | 327 | 403 |
| 6000 | **V-Miscellaneous:** | | | | |
| 6100 | (a) Medical Care | 491 | 534 | 476 | 507 |
| 6200 | (b) Education, Recreation & Amusement | 421 | 718 | 581 | 638 |
| 6300 | (c) Transport & Communication | 575 | 449 | 576 | 614 |
| 6400 | (d) Personal Care & effects | 493 | 443 | 504 | 460 |
| 6500 | (e) Others | 482 | 564 | 443 | 469 |
| 6600 | Miscellaneous Group | 488 | 531 | 503 | 510 |
| | **GENERAL INDEX** | 498 | 557 | 516 | 489 |

For Director ,
Joint Director,
Directorate of Economics and Statistics,
Government of Karnataka, Bangalore.

PR-1126

**1ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ:ಎ3(ಬಿ1):ಅಮೊ:ಶ್ರೀಗಂಧ:ಮಿನಿವ್ಯಾನ್:ಸಿಆರ್:19/1998-99 ದಿನಾಂಕ: 17ನೇ ಮೇ 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಮಿನಿ ವ್ಯಾನ್ ನೊಂದಣಿ ಸಂಖ್ಯೆ: ಕೆಎ-18-7682ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ: 268: ಸಿಬ್ಬಂದಿ: ಸಬೈ: ಶ್ರೀಗಂಧದ ತುಂಡುಗಳು/ 1998-99 ದಿನಾಂಕ: 18.12.1998.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 31.12.1998 ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 18.02.1999 ರಲ್ಲಿ ಪ್ರಕಟವಾಗಿರುತ್ತದೆ. ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ: 2.5.1999 ರಲ್ಲಿ ಪ್ರಕಟವಾಗಿದೆ.

**ಪ್ರಕರಣದ ಹಿನ್ನೆಲೆ:** ಸಕ್ರೆಬೈಲು ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ ದಿನಾಂಕ: 17.12.1998 ರಂದು, ಶಿವಮೊಗ್ಗ-ತೀರ್ಥಹಳ್ಳಿ ಮಾರ್ಗದ ರಸ್ತೆಯಲ್ಲಿ ಬರುವ ಮಿಲಿಟರಿ ಕ್ಯಾಂಪ್ ಹತ್ತಿರ ಮಿನಿ ವ್ಯಾನ್ ನೋಂದಣಿ ಸಂಖ್ಯೆ: ಕೆಎ-18-7682ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ 189 ಸಂಖ್ಯೆಯ ತುಂಡುಗಳು ಮತ್ತು 4 ಪ್ಲಾಸ್ಟಿಕ್ ಚೀಲದಲ್ಲಿದ್ದ ಸಣ್ಣ ಸಣ್ಣ ತುಂಡುಗಳು 750.00 ಕೆ.ಜಿ. ತೂಕವಿರುವ ಶ್ರೀಗಂಧವನ್ನು ವಾಹನ ಸಮೇತ ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1693ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಶ್ರೀಗಂಧ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ ತಿಳುವಳಿಕೆ ಪತ್ರವನ್ನು ಕನ್ನಡ ದಿನಪತ್ರಿಕೆಯಾದ ಸಂಯುಕ್ತ ಕರ್ನಾಟಕದಲ್ಲಿ ದಿನಾಂಕ: 2.5.1999 ರಂದು ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 18.2.1999 ರಲ್ಲಿ ಪ್ರಕಟಿಸಲಾಗಿರುತ್ತದೆ.

ವಾಹನದ ನೊಂದಾಯಿತ ಮಾಲೀಕರ ವಿವರ ಪಡೆಯಲು ಸಹಾಯಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ಬಿ ಎಕ್ಸ್ಟ್ರ್ಯಾಕ್ಟ್ ನೀಡಲು ಕೋರಲಾಗಿದ್ದು, ಸದರಿಯವರು ಅವರ ಕಛೇರಿಯ ಪತ್ರ ಸಂಖ್ಯೆ: ಟಿಆರ್:ಜಿಎಲ್-104/2002 ದಿನಾಂಕ: 16.04.2002 ರ ಪತ್ರದಲ್ಲಿ ಈ ವಾಹನವು ನಮ್ಮ ಕಛೇರಿಯಲ್ಲಿ ನೋಂದಾಯಿಸಲಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಬಗ್ಗೆ ಉಪ ಸಾರಿಗೆ ಆಯುಕ್ತರು, ಬೆಂಗಳೂರು ಇವರಿಗೂ ಸಹ ದಿನಾಂಕ: 20.02.2004 ರಂದು ಪತ್ರ ಬರೆಯಲಾಗಿರುತ್ತದೆ. ಮಾಹಿತಿ ನೀಡಿರುವುದಿಲ್ಲ.

ಈ ಮೊಕದ್ದಮೆಗೆ ಸಂಬಂಧಪಟ್ಟಂತೆ, ಸಾಕಷ್ಟು ಕಾಲಾವಕಾಶ ಕೊಟ್ಟರೂ, ವಾಹನದ ವಾರಸುದಾರರು, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೂ ಕೋರದೇ ಇರುವುದರಿಂದ ಈ ವಾಹನವನ್ನು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಿದ್ದುದು ಸ್ಪಷ್ಟವಾಗಿರುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ. ಎ. ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಮಿನಿ ವ್ಯಾನ್ ನೋಂದಣಿ ಸಂಖ್ಯೆ:ಕೆಎ-18-7682 (ಎಂಜೀನ್ ನಂಬರ್ ಇಲ್ಲ), ಛಾಸಿಸ್ ನಂಬರ್ 37011CV03UC238 ಮತ್ತು 189 ಸಂಖ್ಯೆಯ ಶ್ರೀಗಂಧದ ತುಂಡುಗಳು, 4 ಪ್ಲಾಸ್ಟಿಕ್ ಚೀಲದಲ್ಲಿದ್ದ ಸಣ್ಣ ಸಣ್ಣ ತುಂಡುಗಳು ಒಟ್ಟು 750.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಶ್ರೀಗಂಧ ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 17.05.2004 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ. ಎ. ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್.1127

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯದಲ್ಲಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ**

**ದಾವೆ ಸಂಖ್ಯೆ:4/2004-05**

| ವಾದಿಗಳು: | ವಿರುದ್ಧ | ಪ್ರತಿವಾದಿಗಳು: |
|---|---|---|
| ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಗಂಟಿಗಾನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು | | ಶ್ರೀ ಎಂ. ನರಸಿಂಹ ಸ್ವಾಮಿ, ಮಾಜಿ ಮಾರಾಟ ಗುಮಾಸ್ತ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಗಂಟಿಗಾನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು |

**ಸ್ಥಿರಾಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ನೀಡಿರುವ ನೋಟೀಸು**

ಈ ನ್ಯಾಯಾಲಯದಲ್ಲಿ ದಾಖಲಾಗಿರುವ ದಾವೆಯಲ್ಲಿ ಪ್ರತಿವಾದಿಯಾದ ಶ್ರೀ ಎಂ. ನರಸಿಂಹ ಸ್ವಾಮಿ, ಮಾಜಿ ಮಾರಾಟ ಗುಮಾಸ್ತ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಗಂಟಿಗಾನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು ರವರು ಸದರಿ ಸಂಘ/ ಬ್ಯಾಂಕಿನ ಮೆಳೇಕೋಟೆ ಶಾಖೆಯ ದಾಸ್ತಾನಿನ ಪ್ರಭಾರವನ್ನು ವಾದಿ ಬ್ಯಾಂಕಿನಿಂದ ಹೊಸದಾಗಿ ನೇಮಕವಾದ ಶ್ರೀ ಜಿ. ಎ. ದೇವರಾಜ ರವರಿಗೆ ಮೆಳೇಕೋಟೆ ಶಾಖೆಯ ದಾಸ್ತಾನಿನ ಪ್ರಭಾರ ವಹಿಸಿಕೊಡುವಾಗ ವಾದಿ ಬ್ಯಾಂಕಿನಲ್ಲಿ ಹೊಂದಿದ ಮೆಳೇಕೋಟೆ ಶಾಖೆಯ ದಾಸ್ತಾನಿನ ಜವಾಬ್ದಾರಿ ಖಾತೆಯಂತೆ ರೂ. 5,43,197-00 ಗಳನ್ನು ಹಣ ದುರುಪಯೋಗ ಮಾಡಿರುವುದಾಗಿ ತಿಳಿಸುತ್ತಾ, ಸದರಿ ಮೊಬಲಗನ್ನು ವಸೂಲಿ ಮಾಡಲು ಆದೇಶ ನೀಡಲು ವಾದಿಯು ಕೋರಿರುತ್ತಾರೆ.

ವಾದಿಯು ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯು ಇತ್ಯರ್ಥವಾಗಲು ವಿಳಂಬವಾಗುವ ಸಾಧ್ಯತೆ ಇರುವುದರಿಂದ ಪ್ರತಿವಾದಿಗಳು ಹೊಂದಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡಿದಲ್ಲಿ ಪ್ರತಿವಾದಿಗಳು ಹಣ ದುರುಪಯೋಗ ಮಾಡಿರುವ ಮೊಬಲಗನ್ನು ವಸೂಲಿ ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಪ್ರತಿವಾದಿ ಹೊಂದಿರುವ ಕೆಳಗೆ ಸೂಚಿಸಿರುವ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರನ್ವಯ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೋರಿರುತ್ತಾರೆ.

ವಾದಿಯ ಕೋರಿಕೆಯನ್ನು ಪರಿಗಣಿಸಿ, ಪ್ರತಿವಾದಿ ಹೊಂದಿರುವ ಸ್ಥಿರಾಸ್ತಿಗಳನ್ನು ಸದರಿ ಅರ್ಜಿಯು ಇತ್ಯರ್ಥವಾಗುವ ಪೂರ್ವದಲ್ಲಿ ಮುಟ್ಟುಗೋಲು ಹಾಕಿಕೊಳ್ಳುವುದು ಅತ್ಯಾವಶ್ಯಕವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ, ಹೆಚ್. ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ: 21.11.2001 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪ್ರತಿವಾದಿ ಹೊಂದಿರುವ ಈ ಕೆಳಕಂಡ ಅನುಬಂಧದಲ್ಲಿ ಸೂಚಿಸಿರುವ ಸ್ಥಿರಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾ, ಈ ಬಗ್ಗೆ ಪ್ರತಿವಾದಿಯು ಈ ಆದೇಶ ತಲುಪಿದ 15 ದಿನಗಳೊಳಗಾಗಿ ಮುಟ್ಟುಗೋಲು ಹಾಕಿಕೊಂಡಿರುವ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು (ಕ್ಯಾಷ್ ಸೆಕ್ಯೂರಿಟಿ) ನೀಡಿ ಸದರಿ ಆದೇಶವನ್ನು ಹಿಂತೆಗೆದುಕೊಳ್ಳಲು ಕೋರಬಹುದೆಂದು ಅವಕಾಶ ನೀಡಲಾಗಿದೆ. ತಪ್ಪಿದಲ್ಲಿ ಮುಟ್ಟುಗೋಲು ಹಾಕಿಕೊಳ್ಳಲು ನೀಡಿರುವ ಈ ಆದೇಶವನ್ನು ಸ್ಥಿರಗೊಳಿಸಲಾಗುವುದೆಂದು ಹಾಗೂ ಈ ಸ್ಥಿರಾಸ್ತಿಯನ್ನು ಮಾರಾಟ ಮಾಡಲಾಗಲಿ, ಉಡುಗೊರೆ ಹಾಗೂ ಇತರೆ ಕಾರಣಗಳಿಂದ ಪರಭಾರೆ ಮಾಡಲು ನಿಷೇಧಿಸಲಾಗಿದೆ.

ಈ ಆದೇಶವನ್ನು ಧಿಕ್ಕರಿಸಿ ಕೆಳಕಂಡ ಸ್ಥಿರಾಸ್ತಿಯನ್ನು ಯಾವುದೇ ರೀತಿಯಲ್ಲಿ ಪರಭಾರೆ ಮಾಡಿದ್ದನ್ನು ಸ್ವೀಕರಿಸಿದ್ದಲ್ಲಿ ಅದಕ್ಕೆ ಅವರೇ ಸ್ವಂತ ಜವಾಬ್ದಾರರಾಗಿರುತ್ತಾರೆ.

**ಅನುಬಂಧ**

**ಮುಟ್ಟುಗೋಲು ಹಾಕಿಕೊಂಡ ಸ್ಥಿರಾಸ್ತಿಗಳ ವಿವರ**

| ಕ್ರ.ಸಂ. | ಸ್ಥಿರಾಸ್ತಿಗಳ ವಿವರ | ಸರ್ವೆನಂ. | ವಿಸ್ತೀರ್ಣ ಎಕರೆ-ಗುಂಟೆ | ಸ್ಥಳ |
|---|---|---|---|---|
| 1 | ವ್ಯವಸಾಯ ಜಮೀನು (ಖುಷ್ಕಿ) | 28 | 1-36 | ಗಂಟಿಗಾನಹಳ್ಳಿ |
| 2 | ವ್ಯವಸಾಯ ಜಮೀನು | 82 | 0-28 | ಗಂಟಿಗಾನಹಳ್ಳಿ |
| 3 | ಆರ್.ಸಿ.ಸಿ. ಮನೆ | 303-2 | 30x25 | ಗಂಟಿಗಾನಹಳ್ಳಿ |

ಈ ಆದೇಶವನ್ನು ನನ್ನ ಸಹಿ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 24.7.2004 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.1128 ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ :** ಶ್ರೀಮತಿ ವಿಜಯಲಕ್ಷ್ಮಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಎಲೆತೋಟದಹಳ್ಳಿ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಡಿಪಿಎನ್(1):ಸಿಆರ್:31: 2000-01 ದಿನಾಂಕ: 02.08.01.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶದ ಸಂ:ಡಿಪಿಎನ್(1): ಸಿಆರ್:31:00-01 ದಿನಾಂಕ: 18.12.02.
3. ವಿಚಾರಣಾ ವರದಿಯ ಸಂ:ವಿಆ:ವಿಚಾರಣೆ:ಎನ್‌ಜಿ:158:02-03 ದಿನಾಂಕ: 11.11.03.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(1) ಸಿಆರ್:31:00-01 ದಿನಾಂಕ: 1.1.04 ಮತ್ತು 16.04.04.
5. ನೌಕರರ ಲಿಖಿತ ಅಹವಾಲು ಪತ್ರದ ದಿನಾಂಕ: 29.04.04.

**ಪ್ರಸ್ತಾವನೆ:**

ಶ್ರೀಮತಿ ವಿಜಯಲಕ್ಷ್ಮಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಎಲೆತೋಟದಹಳ್ಳಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ: 7.11.94 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿ ಆಗಿದ್ದು ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ಮೇಲೆ ಓದಲಾದ (3)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (4)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕೆ ಅನುಗುಣವಾಗಿ ಮೇಲೆ ಓದಲಾದ (5)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್: (1):ಸಿಆರ್:31:00-01 ಬೆಂಗಳೂರು ದಿನಾಂಕ: 26ನೇ ಜುಲೈ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಜಿ.ಬಿ. ದೇಸಾಯಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಆದ ನಾನು ಶ್ರೀಮತಿ ವಿಜಯಲಕ್ಷ್ಮಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಎಲೆತೋಟದಹಳ್ಳಿ ಇವರು ದಿನಾಂಕ: 7.11.94 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು ವಿಚಾರಣೆಯಿಂದ ಸಾಬೀತಾಗಿರುವುದರಿಂದ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸಿದ್ದೇನೆ.

**ಜಿ.ಬಿ. ದೇಸಾಯಿ**
ಪಿ.ಆರ್.1129 ನಿರ್ದೇಶಕರು,
ಆರೋಗ್ಯ ಮತ್ತು ಕು.ಕ. ಸೇವೆಗಳು.

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಯುಬಿಸಿ-176/ಯುಎಂಸಿ/2003-04 ದಿನಾಂಕ: 29ನೇ ಜುಲೈ 2004**

**ವಿಷಯ :** ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿ, ಬೆಂಗಳೂರು ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72-ಎ ರೀತ್ಯಾ ಸಮಾಪನೆ-ಸಮಾಪನಾಧಿಕಾರಿಯ ಬದಲಾವಣೆ ಕುರಿತು.

**ಉಲ್ಲೇಖ :** 1. ಭಾರತೀಯ ರಿಸರ್ವ್ ಬ್ಯಾಂಕ್, ಮುಂಬೈ ಇದರ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರ ಸಂಖ್ಯೆ ಯುಬಿಡಿ/ಬಿಎಸ್‌ಡಿ(iv)-35-12-2003/1738/2003-04 ದಿನಾಂಕ: 08.02.2004.

2. ಈ ಕಛೇರಿಯ ಸಮಸಂಖ್ಯೆಯ ಆದೇಶ ದಿನಾಂಕ: 02.06.2004

3. ಸರ್ಕಾರದ ಆದೇಶದ ಸಂಖ್ಯೆ ಸಇ/418/ಎಸ್‌ಸೇ/2004 ದಿನಾಂಕ: 17.7.2004.

4. ಶ್ರೀ ಬಿ. ಟಿ. ಚಾಮರಾಜನ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಹಾಗೂ ಸಮಾಪನಾಧಿಕಾರಿ ಇವರ ಪತ್ರ ಸಂಖ್ಯೆ: ಕೆಸಿಎಸ್‌ಬಿಎನ್/ಕ.ವ/2004-05/7826/1 ದಿನಾಂಕ: 19.7.2004.

**ಪ್ರಸ್ತಾವನೆ:**

ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿ, ಬೆಂಗಳೂರು ಇದು ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ 1949ರ ಕಲಂ 11(1),22(3)(ಎ), 18 ಮತ್ತು 24ನ್ನು ಪಾಲನೆ ಮಾಡುವಲ್ಲಿ ವಿಫಲವಾಗಿದೆ. ಅಲ್ಲದೆ ಋಣಗಳನ್ನು (debts)ತೀರಿಸಲು ಅಸಮರ್ಥವಾಗಿದ್ದ ಹಿನ್ನೆಲೆಯಲ್ಲಿ ಈ ಬ್ಯಾಂಕ್‌ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72-ಎ ರನ್ವಯ ಸಮಾಪನೆಗೊಳಿಸುವಂತೆ ಉಲ್ಲೇಖ (1)ರ ಪತ್ರದಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್, ಕೋರಿದ್ದರ ಮೇರೆಗೆ ಬ್ಯಾಂಕ್‌ನ್ನು ಕಾಯ್ದೆ ಕಲಂ 72-ಎ ರನ್ವಯ ಸಮಾಪನೆಗೊಳಿಸಿ ಸಮಾಪಕರನ್ನಾಗಿ ಶ್ರೀ ಎನ್.ಎಂ. ಪಾಟೀಲ್, ಸಹಕಾರ ಸಂಘಗಳ ಜಂಟಿ ನಿಬಂಧಕರು, (ಕಾನೂನು ಕೋಶ) ನಿಬಂಧಕರ ಕಛೇರಿ, ಬೆಂಗಳೂರು ಇವರನ್ನು ಹೆಚ್ಚುವರಿ ಪ್ರಭಾರದಲ್ಲಿ ಉಲ್ಲೇಖ (2) ರ ಆದೇಶದಲ್ಲಿ ನೇಮಿಸಲಾಗಿತ್ತು.

ಉಲ್ಲೇಖ (3)ರ ಸರ್ಕಾರದ ಅಧಿಸೂಚನೆಯಲ್ಲಿ ಬ್ಯಾಂಕಿನ ಪೂರ್ಣ ಪ್ರಮಾಣದ ಸಮಾಪಕರನ್ನಾಗಿ ಶ್ರೀ ಬಿ. ಟಿ. ಚಾಮರಾಜನ್, ಸಹಕಾರ ಸಂಘಗಳ ಜಂಟಿ ನಿಬಂಧಕರು ಇವರನ್ನು ಸ್ಥಳ ನಿಯುಕ್ತಿಗೊಳಿಸಿ ಆದೇಶ ಹೊರಡಿಸಿದ್ದು, ಇದರನ್ವಯ ಸದರಿ ಅಧಿಕಾರಿಯವರು ದಿನಾಂಕ: 19.7.2004 ರಂದು ಅಪರಾಹ್ನ ಸದರಿ ಬ್ಯಾಂಕಿನ ಸಮಾಪಕರಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಾಗಿ ಉಲ್ಲೇಖ (4)ರ ಪತ್ರದಲ್ಲಿ ತಿಳಿಸುತ್ತಾ ತಮ್ಮನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72-ಎ ರಡಿಯಲ್ಲಿ ಸಮಾಪಕರನ್ನಾಗಿ ದಿನಾಂಕ: 19.7.2004 ರಿಂದ ಅನ್ವಯವಾಗುವಂತೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಆದೇಶ**

ಪ್ರಸ್ತಾವೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಕಛೇರಿಯ ಆದೇಶದನ್ವಯ ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ ನಿ, ಬೆಂಗಳೂರು ಇದರ ಸಮಾಪನಾಧಿಕಾರಿಯನ್ನಾಗಿ ಶ್ರೀ ಎನ್. ಎಂ. ಪಾಟೀಲ್, ಸಹಕಾರ ಸಂಘಗಳ ಜಂಟಿ ನಿಬಂಧಕರು, (ಕಾನೂನು ಕೋಶ) ನಿಬಂಧಕರ ಕಛೇರಿ, ಬೆಂಗಳೂರು ಇವರನ್ನು ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಲಾಗಿದ್ದ ಆದೇಶವನ್ನು ಮಾರ್ಪಡಿಸಿ, ಅವರ ಬದಲಿಗೆ ಶ್ರೀ ಬಿ. ಟಿ. ಚಾಮರಾಜನ್, ಸಹಕಾರ ಸಂಘಗಳ ಜಂಟಿ ನಿಬಂಧಕರು ಇವರನ್ನು ದಿನಾಂಕ: 19.7.2004 ರಿಂದ ಅನ್ವಯವಾಗುವಂತೆ ಸಮಾಪಕರನ್ನಾಗಿ ನೇಮಿಸಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.7.2004 ರಂದು ಹೊರಡಿಸಿದೆ.

ಪಿ.ಆರ್.1130 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

## ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಚಿತ್ರದುರ್ಗ

### ಪ್ರಕಟಣೆ

### ಸಂಖ್ಯೆ: ಬಿಸಿಎಂ:ಮತಕಾತ:ಸಿಆರ್-9:2004-05 ದಿನಾಂಕ: 28ನೇ ಜುಲೈ 2004

**ವಿಷಯ :** 2004-05ನೇ ಸಾಲಿನಲ್ಲಿ ಮತೀಯ ಅಲ್ಪಸಂಖ್ಯಾತ ಕಾನೂನು ಪದವೀಧರರಿಗೆ ಕಾನೂನು ತರಬೇತಿ ನೀಡಲು ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

ಸರ್ಕಾರದ ಆದೇಶ ಸಂ: ಎಸ್‌ಡಬ್ಲ್ಯೂಎಲ್ 68 ಎನ್‌ಇಡಬ್ಲ್ಯೂ: 98 ದಿನಾಂಕ: 2.11.1990 ಹಾಗೂ ಸಕಇ 304 ಎಸ್‌ಇಡಬ್ಲ್ಯೂ 93 ದಿನಾಂಕ: 30.3.1995 ರನ್ವಯ 2004-05ನೇ ಸಾಲಿನಲ್ಲಿ ಚಿತ್ರದುರ್ಗ ಜಿಲ್ಲೆಯ ಮತೀಯ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಇಬ್ಬರು ಕಾನೂನು ಪದವೀಧರರನ್ನು ಕಾನೂನು ತರಬೇತಿಗೆ ಆಯ್ಕೆ ಮಾಡಿ ತರಬೇತಿ ನೀಡಲಾಗುವುದು. ಆಸಕ್ತ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿಗಳನ್ನು ಸಲ್ಲಿಸಬಹುದು. ಅರ್ಜಿಗಳನ್ನು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಚಿತ್ರದುರ್ಗ ಇವರಿಂದ ಕಛೇರಿ ಸಮಯದಲ್ಲಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿ ನಮೂನೆಗಳನ್ನು ಅಗತ್ಯ ದಾಖಲಾತಿಗಳೊಂದಿಗೆ ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಚಿತ್ರದುರ್ಗ ಇವರಿಗೆ ಸಲ್ಲಿಸುವುದು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 26.8.2004 ಆಗಿರುತ್ತದೆ.

**ನಿಬಂಧನೆಗಳು:**

1. ಅಭ್ಯರ್ಥಿಯು ಎಲ್.ಎಲ್.ಬಿ. ಪರೀಕ್ಷೆಯನ್ನು ಪಾಸು ಮಾಡಿರಬೇಕು. ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿದ್ದು, ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಎರಡು ವರ್ಷಗಳ ಅವಧಿಯೊಳಗೆ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.
2. ಸರ್ಕಾರದ ಆದೇಶ ಸಂ: ಸಕಇ 40 ಅಬಿಸಿಎಂ 95 ದಿನಾಂಕ: 8.2.1995 ಹಾಗೂ ಸಕಇ 225 ಬಿಸಿಎ 2000 ಬೆಂಗಳೂರು ದಿನಾಂಕ: 30.3.2002 ರಲ್ಲಿ ನಿಗದಿಪಡಿಸಿರುವ ಪ್ರಮಾಣ ಪತ್ರವನ್ನು ಪಡೆದು ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಜೈನ್,

ಕ್ರಿಶ್ಚಿಯನ್, ಪಾರ್ಸಿ, ಬುದ್ದಿಸ್ಟ್, ಜನಾಂಗಕ್ಕೆ ಸೇರಿದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬೇಕು. ವಾರ್ಷಿಕ ಆದಾಯ ರೂ. 15,000-00 ಗಳನ್ನು ಮೀರಿರಬಾರದು.

3. ತರಬೇತಿ ಅವಧಿಯು ನಾಲ್ಕು ವರ್ಷಗಳಾಗಿದ್ದು, ತರಬೇತಿ ಅವಧಿಯಲ್ಲಿ ತರಬೇತಿದಾರರಿಗೆ ಮಾಸಿಕ 1,000-00 ರೂ.ಗಳ ತರಬೇತಿ ಭತ್ಯೆ ನೀಡಲಾಗುವುದು. ಅಭ್ಯರ್ಥಿಗಳನ್ನು ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಲಾಗುವುದು.
4. ಅಭ್ಯರ್ಥಿಯ ಗರಿಷ್ಠ ವಯೋಮಿತಿಯು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 30 ವರ್ಷಗಳನ್ನು ಮೀರಿರಬಾರದು.
5. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್: ಸರ್ಕಾರಿ ವಕೀಲರು: 20 ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವಂತಹ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.
6. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೋಂದಾಯಿಸಿರಬೇಕು. ನೋಂದಾಯಿಸಿಲ್ಲದ ಪಕ್ಷದಲ್ಲಿ ಆಯ್ಕೆಯಾದ ನಂತರ ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿದ ಹೊರತು ಶಿಷ್ಯವೇತನವನ್ನು ಪಾವತಿ ಮಾಡಲಾಗುವುದಿಲ್ಲ.
7. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಆದಾಯ: ಜಾತಿ ಪ್ರಮಾಣ ಪತ್ರ ಅಥವಾ ಯಾವುದೇ ತಪ್ಪು ಮಾಹಿತಿಯನ್ನು ನೀಡಿ ಆಯ್ಕೆಗೊಂಡಲ್ಲಿ ಅಂತವರನ್ನು ಶಿಕ್ಷೆಗೆ ಗುರಿಪಡಿಸಲಾಗುವುದಲ್ಲದೆ ಶಿಷ್ಯವೇತನದ ಜೊತೆಗೆ ಶೇಕಡ 10 ರಷ್ಟು ಬಡ್ಡಿ ಸೇರಿಸಿ ಭೂ ಕಂದಾಯದ ರೂಪದಲ್ಲಿ ವಸೂಲಿ ಮಾಡಲಾಗುವುದು.
8. ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯಭಾಗದಲ್ಲಿ ಬಿಟ್ಟರೆ ಅವರು ಇಲಾಖೆಯಿಂದ ಪಡೆದ ಸಂಪೂರ್ಣ ಶಿಷ್ಯವೇತನವನ್ನು ಹಿಂದಿರುಗಿಸಬೇಕಾಗುತ್ತದೆ.
9. ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣ: ತಪ್ಪು ಮಾಹಿತಿ: ಅವಧಿ ಮೀರಿದ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

**ವೈ. ಈರಣ್ಣ**

ಪಿ.ಆರ್.1131 ಸದಸ್ಯ ಕಾರ್ಯದರ್ಶಿ ಹಾಗೂ ಜಿಲ್ಲಾ ಅಧಿಕಾರಿ,

ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು

## ಪ್ರಕಟಣೆ

**ಸಂಖ್ಯೆ: ಜಿಸಕಅ:ಬೆಂಗ್ರಾ:ಕಾಪದಸಧ:ಸಿಆರ್-1:2004-05 ದಿನಾಂಕ: 20ನೇ ಜುಲೈ 2004**

**ವಿಷಯ :** ಆಡಳಿತ ನ್ಯಾಯಾಧಿಕರಣ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿಯ: ವರ್ಗದ ಕಾನೂನು ಪಧವೀಧರರಿಗೆ ತರಬೇತಿ ನೀಡುವ ಬಗ್ಗೆ.

2004-05ನೇ ಸಾಲಿಗೆ ಬೆಂಗಳೂರು (ಗ್ರಾ) ಜಿಲ್ಲೆಯ ವ್ಯಾಪ್ತಿಯಲ್ಲಿ ತಾಲ್ಲೂಕುಗಳಿಂದ ಆಡಳಿತ ನ್ಯಾಯಾಧಿಕರಣ ಯೋಜನೆಯಡಿ ತರಬೇತಿ ನೀಡಲು ಪರಿಶಿಷ್ಟ ಜಾತಿ ಮತ್ತು ವರ್ಗದ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಇಚ್ಚೆಯುಳ್ಳ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ಷರತ್ತುಗಳನ್ನು ಪೂರೈಸಬಲ್ಲವರು ಮಾತ್ರ ಅರ್ಜಿಯನ್ನು ಸಲ್ಲಿಸಬಹುದಾಗಿದೆ. ನಿಗದಿತ ಅರ್ಜಿಗಳನ್ನು ಈ ಕಛೇರಿಯಿಂದ ಪಡೆಯಬಹುದು. ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳೊಳಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಬೇಕಾಗಿರುವ ವಿಳಾಸ ಈ ಕೆಳಕಂಡಂತೆ ಇದೆ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು<br>
ಬೆಂಗಳೂರು (ಗ್ರಾ) ಜಿಲ್ಲೆ, 4ನೇ ಕ್ರಾಸ್<br>
16ನೇ ಅಡ್ಡರಸ್ತೆ, ಸಂಪಂಗಿರಾಮನಗರಂ<br>
(ಪೊಲೀಸ್ ಠಾಣೆಯ ಎದುರು)<br>
ಬೆಂಗಳೂರು-27.

**ಷರತ್ತುಗಳು:**

1. ಅರ್ಜಿ ಸಲ್ಲಿಸುವ ಅಭ್ಯರ್ಥಿಯು ಬೆಂಗಳೂರು (ಗ್ರಾ) ಜಿಲ್ಲೆಯವರಾಗಿರಬೇಕು
2. ಅಭ್ಯರ್ಥಿಗಳು 35 ವರ್ಷದೊಳಗಿನ ವಯೋಮಿತಿಯಲ್ಲಿರಬೇಕು
3. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಮೊದಲು 2 ವರ್ಷಗಳ ಒಳಗಡೆ ಕಾನೂನು ಪದವಿ ಪಡೆದಿರಬೇಕು.
4. ತರಬೇತಿ ಅವಧಿಯು 4 ವರ್ಷಗಳಾಗಿದ್ದು, ಮಾಸಿಕ ರೂ. 1000.00 ಗಳ ಶಿಷ್ಯ ವೇತನವನ್ನು ನೀಡಲಾಗುವುದು.
5. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪ್ರಾಸಿಕ್ಯೂಟರ್ ಬಳಿ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

6. ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಬಿಟ್ಟು ಹೋಗಬಾರದು. ರಾಜ್ಯ ಅಥವಾ ಕೇಂದ್ರ ಸರ್ಕಾರಿ ನೌಕರಿಯು ಸಿಕ್ಕಿದಲ್ಲಿ ಮಾತ್ರ ನಿಯಮ ಸಡಿಲಗೊಳಿಸಲಾಗುವುದು. ಒಂದು ವೇಳೆ ತರಬೇತಿ ಬಿಟ್ಟುಹೋದರೆ ಅಂತಹವರ ಶಿಷ್ಯ ವೇತನವನ್ನು ನಿಯಮಾನುಸಾರ ವಸೂಲಿ ಮಾಡಲಾಗುವುದು.
7. ಸುಳ್ಳು ಮಾಹಿತಿಯನ್ನು, ದಾಖಲಾತಿಗಳನ್ನು ಒದಗಿಸಿ, ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನ ಪ್ರಕಾರ ಶಿಕ್ಷೆಗೆ ಗುರಿಪಡಿಸಲಾಗುವುದು. ಹಾಗೂ ಅಂತಹ ಅಭ್ಯರ್ಥಿಗಳಿಂದ ತರಬೇತಿ ಅವಧಿಯಲ್ಲಿ ನೀಡಿದ ಶಿಷ್ಯವೇತನದ ಶೇಕಡಾ 10ರ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು.
8. ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದಲ್ಲಿ ಅರ್ಜಿ ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
9. ಆಯ್ಕೆ ಸಮಿತಿಯ ತೀರ್ಮಾನೇ ಅಂತಿಮವಾಗುತ್ತದೆ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,
ಬೆಂಗಳೂರು (ಗ್ರಾ) ಜಿಲ್ಲೆ.

ಪಿ.ಆರ್.1132

## ಅಬಕಾರಿ ಇಲಾಖೆ

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ

## ಪ್ರಕಟಣೆ

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:205/2003-04 ದಿನಾಂಕ: 28ನೇ ಜುಲೈ 2004**

**ವಿಷಯ :** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳ ವಿಲೇವಾರಿ ಬಗ್ಗೆ.

**ಉಲ್ಲೇಖ :** ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಾಹನಗಳ ಸಂಖ್ಯೆ

1. ಮಾರುತಿ ಓಮಿನಿ ವ್ಯಾನ್ ಸಂ: KA-01-N-529
2. ಜೀಪು ನಂ. KL-12-2151
3. ಟಾಟಾ ಸುಮೋ ನಂ. KA-17-3488

ಉಲ್ಲೇಖದಲ್ಲಿ ಹೇಳಲಾದ ವಾಹನಗಳು ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ, ಮದ್ಯಸಾರ, ಸ್ವದೇಶಿ ಮದ್ಯಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಈ ಕೆಳಕಂಡ ಮೂರು ವಾಹನಗಳ ಮೇಲೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

1. ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ನಾಪೋಕ್ಲು ಇವರ ಪ್ರ.ವ.ನಂ. 19/2001, ದಿನಾಂಕ: 11.8.2003ರಲ್ಲಿ ವಶಪಡಿಸಿಕೊಂಡ ಜೀಪು ನಂ. KL-12-2151
2. ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ ಇವರ ಮೊ.ಸಂ. 29/03-04, ದಿನಾಂಕ: 25.2.04 ರಲ್ಲಿ ವಶಪಡಿಸಿಕೊಂಡ ಟಾಟಾ ಸುಮೋ ನಂ.KA-17-3488
3. ಮಡಿಕೇರಿ ಗ್ರಾಮಾಂತರ ಪೋಲಿಸ್ ಉಪ ನಿರೀಕ್ಷಕರ ಮೊ.ಸಂ. 40/2003-04, ದಿನಾಂಕ: 31.3.04 ರಲ್ಲಿ ವಶಪಡಿಸಿಕೊಂಡ ಮಾರುತಿ ಓಮಿನಿ ವ್ಯಾನ್ ಸಂ: KA-01-N-529

ಸದರಿ ವಾಹನಗಳ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965 ರ ಕಲಂ 43(ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲಿಕರ ಮಾಹಿತಿ ಬೇಕಾಗಿರುತ್ತದೆ. ಈವರೆಗೆ ಸಂಬಂಧಪಟ್ಟವರು ಈ ಪ್ರಾಧಿಕಾರಕ್ಕೆ ಬಂದು ಅರ್ಜಿ ಸಲ್ಲಿಸಿರುವುದಿಲ್ಲ ಹಾಗೂ ಸದರಿ ವಾಹನಗಳ "ಬಿ" ಎಕ್ಸ್ಟ್ರಾಕ್ಟ್ ದೊರೆಯುತ್ತಿಲ್ಲ.

ಆದುದರಿಂದ ಸದರಿ ವಾಹನದ ಮಾಲಿಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸಿದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಪ್ರಕಾರ ನೇರವಾಗಿ ಸದರಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.1133

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ-ಉಪ-ವಿಭಾಗ, ಮಧುಗಿರಿ

## ತುಮಕೂರು ಜಿಲ್ಲೆ ಇವರ ನಡವಳಿಕೆಗಳು

**ವಿಷಯ :** ಶ್ರೀ ಸಿ. ಎ. ನಾಗರಾಜು ಉರುಫ್ ಸಿ. ಎ. ನಾಗರಾಜಯ್ಯ ಮಾಜಿ ಕಾರ್ಯದರ್ಶಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಬೈಚಾಪುರ ಕೊರಟಗೆರೆ ತಾಲ್ಲೂಕು ಇವರ ತಂದೆ ಶ್ರೀ ಸಿ. ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ ಚಿಕ್ಕನಹಳ್ಳಿ ಹೊಳವನಹಳ್ಳಿ ಹೋಬಳಿ ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಬಹಿರಂಗ ಹರಾಜು ಮಾರಾಟದಲ್ಲಿ ಖರೀದಿಸಿರುವ ಸ್ಥಿರ ಸ್ವತ್ತನ್ನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈಚಾಪುರ ಕೊರಟಗೆರೆ ತಾಲ್ಲೂಕು ಇದರ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ :** 1. ಶ್ರೀ ಹೆಚ್. ಆರ್. ಮಲ್ಲಪ್ಪ, ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಇವರ ಪ್ರಸ್ತಾವನೆ ಪತ್ರದ ನಂ. ಸನಿ. 33:ಮಾ:ಅ:ಇ:ವಿ:12: 98-99:03-04 ದಿನಾಂಕ: 5.4.2003.

2. ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಕೊರಟಗೆರೆ ಈ ನ್ಯಾಯಾಲಯದಲ್ಲಿ ಓಎಸ್.ನಂ. 98: 2003ರ ರೀತಿ ದಾಖಲಾಗಿ ದಿನಾಂಕ 3.11.2003 ರಂದು ಹೊರಬಿದ್ದಿರುವ ತೀರ್ಪು ಪ್ರಕಾರ
3. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ ತುಮಕೂರು ಇವರ ನ್ಯಾಯಾಲಯದ ಅಪೀಲು ನಂ. ಡಿಆರ್‌ಟಿ: 2:2003-04 ತೀರ್ಪು ದಿನಾಂಕ: 23.2.2004

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈಚಾಪುರ, ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ ಈ ಹಾಲಿನ ಸಹಕಾರ ಸಂಘವು ಕರ್ನಾಟಕ ಸಹಕಾರ ಕಾಯಿದೆ 1959 ನಿಯಮ 1960ರ ಅನ್ವಯ ನೊಂದಣಿಯಾಗಿದ್ದು ನೊಂದಣಿಗೊಂಡ ಉಪನಿಯಮಗಳನ್ವಯ ಕಾರ್ಯನಿರ್ವಹಿಸುತ್ತಿದ್ದ ಈ ಸಂಘದಲ್ಲಿ ಶ್ರೀ ಸಿ. ಎ. ನಾಗರಾಜು ಉರುಫ್ ಸಿ. ಎ. ನಾಗರಾಜಯ್ಯ ಚಿಕ್ಕನಹಳ್ಳಿ ಕೊರಟಗೆರೆ ತಾ: ಇವರು ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಅವಧಿಯಲ್ಲಿ ರೂ. 95500-00 ಹಣ ದುರುಪಯೋಗ ಮಾಡಿಕೊಂಡ ಹಿನ್ನೆಲೆಯಲ್ಲಿ ದಾವಾ ಡಿಕ್ರಿ ನಡೆದು ಅಮಲ್ಜಾರಿ ಪ್ರಕರಣದ ಸಂಖ್ಯೆ: 12: 98-99ರ ಪ್ರಕಾರ ರೂ. 152339-00 ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳನ್ನು ಮೇಲ್ಕಂಡ ಸಂಘಕ್ಕೆ ಪಾವತಿಸಬೇಕಾಗಿರುತ್ತದೆ. ಈ ಬಗ್ಗೆ ತೀರ್ಪು ಋಣಿದಾರರಿಗೆ ಫಾರಂ ನಂ. 2, 6 ಜಾರಿ ಮಾಡಿರುತ್ತಾರೆ. ಆದರೂ ದುರುಪಯೋಗದ ಹಣವನ್ನು ಮರುಪಾವತಿ ಮಾಡಿರುವುದಿಲ್ಲ. ನಂತರ ಸ್ಥಿರಾಸ್ತಿ ಹರಾಜು ಮಾಡಲು ದಿನಾಂಕ: 20.12.2002 ರಂದು ದಿನಾಂಕ ನಿಗದಿಪಡಿಸಿ ಫಾರಂ ನಂ. 9ನ್ನು ತೀರ್ಪು ಋಣದಾರರ ಹೆಂಡತಿಗೆ ಜಾರಿ ಮಾಡಿರುತ್ತಾರೆ. ಆದರೆ ಈ ಹರಾಜಿನಲ್ಲಿ ಯಾವ ಬಿಡ್‌ದಾರರು ಬಾರದಿರುವುದರಿಂದ ಹರಾಜನ್ನು ಮುಂದೂಡಿರುತ್ತಾರೆ. ನಂತರ ಹರಾಜನ್ನು ದಿನಾಂಕ: 17.3.2003ಕ್ಕೆ ನಿಗದಿಪಡಿಸಿ ಫಾರಂ ನಂ. 8 ಮತ್ತು 9ಗಳಿಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ಸಹಿ ಮಾಡಿಸಿಕೊಂಡು ಖುದ್ದಾಗಿ ಸಿ. ಎ. ನಾಗರಾಜು ರವರಿಗೆ ಜಾರಿ ಮಾಡಿರುತ್ತಾರೆ. ಆದಾಗ್ಯೂ ದುರುಪಯೋಗದ ಹಣವನ್ನು ಮರುಪಾವತಿಸಿರುವುದಿಲ್ಲ. ದಿನಾಂಕ: 17.3.2003 ರಂದು ನಡೆದ ಹರಾಜಿಗೂ ಯಾವ ಬಿಡ್‌ದಾರರು ಭಾಗವಹಿಸದೇ ಇರುವ ಕಾರಣ ಡಿಕ್ರಿ ಬಾಕಿದಾರನ ಸ್ಥಿರ ಸ್ವತ್ತುಗಳನ್ನು ಸಂಘಕ್ಕೆ ಬರಬೇಕಾದ ಮೊಬಲಗು ರೂ. 152339-00 ಮತ್ತು ಮುಂದುವರೆದ ಬಡ್ಡಿ ಹಾಗೂ ಇತರೆ ಖರ್ಚು ಬರಬೇಕಾಗಿರುತ್ತದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಗಳನ್ನು ಕಕ್ಷಿದಾರರ ವಾದಿ ಸಂಘಕ್ಕೆ ವರ್ಗಾಯಿಸಿ ಮಾರಾಟಾಧಿಕಾರಿಗಳು ಬಹಿರಂಗ ಹರಾಜಿನಲ್ಲಿ ದಿನಾಂಕ: 17.3.2003 ರಂದು ಕ್ರಮವಿಟ್ಟಿರುತ್ತಾರೆ. ಈ ಬಹಿರಂಗ ಹರಾಜಿಗೂ ಸಹ ಯಾವ ಬಿಡ್‌ದಾರರು ಭಾಗವಹಿಸಿ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಕೊಂಡುಕೊಳ್ಳದ ಕಾರಣದಿಂದ ವಾದಿ ಸಂಘದ ಹೆಸರಿಗೆ ಬಿಡ್ ನಿಲ್ಲಿಸಿ ತಮ್ಮ ನಡವಳಿಕೆಗಳನ್ನು ಪಾಸ್ ಮಾಡಿರುತ್ತಾರೆ. ಮತ್ತು ಸದರಿ ದಿನಾಂಕ: 17.3.2003ರ ಬಹಿರಂಗ ಹರಾಜನ್ನು ಸ್ಥಿರೀಕರಣಗೊಳಿಸಿಕೊಡಲು ಉಲ್ಲೇಖ (1)ರ ರೀತಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸ್ವೀಕರಿಸಿ ವಾದಿ ಸಂಘದ ಹೆಸರಿಗೆ ವರ್ಗಾಯಿಸುವ ಮುನ್ನ ಸಹಕಾರಿ ಕಾಯಿದೆಯ ನಿಯಮ 38ಎ (3)ರ ರೀತಿ ನೋಟಿಸ್ ನೀಡಲಾಗಿದ್ದು ಈ ನೋಟಿಸಿನ ವಿರುದ್ಧ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ. ಎಂ. ಎಫ್.ಸಿ. ನ್ಯಾಯಾಲಯ ಕೊರಟಗೆರೆಯಲ್ಲಿ ಓ.ಎಸ್.ನಂ. 98: 2003ರ ರೀತ್ಯಾ ಮೊಕದ್ದಮೆ ಹೂಡಿರುತ್ತಾರೆ. ಇದರ ತೀರ್ಪು ದಿನಾಂಕ: 3.11.2003 ರಂದು ಹೊರಬಿದ್ದಿರುತ್ತದೆ. ಇದರಲ್ಲಿ ಓಎಸ್.ನಂ: 98:2003ರ ದಾವೆ ವಜಾ ಆಗಿರುತ್ತದೆ. ಆದುದರಿಂದ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ವಾದಿ ಸಂಘದ ಹೆಸರಿಗೆ ವರ್ಗಾಯಿಸಲು ಯಾವುದೇ ತಕರಾರು ಇರುವುದಿಲ್ಲದಿರುವುದು ವ್ಯಕ್ತವಾಗಿರುತ್ತದೆ. ಆದ್ದರಿಂದ ಮಾರಾಟಾಧಿಕಾರಿಗಳು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ವಾದಿ ಸಂಘದ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರಸ್ವತ್ತುಗಳನ್ನು ಡಿಕ್ರಿ ಹೊಂದಿದ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಬೈಚಾಪುರ ಕೊರಟಗೆರೆ ತಾಲ್ಲೂಕು ಇದರ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ನಂ:ಸಸಂಸನಿ:33:ಎಜಿಎನ್:ಇಎಕ್ಸ್‌ಎನ್:ಸ್ಥಿವ:16:2003-04 ದಿನಾಂಕ: 19ನೇ ಮೇ 2004**

ಶ್ರೀ ಟಿ. ಮುರಳಿಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 (ಬಿ)ರ ಅನ್ವಯ ಹಾಗೂ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ: 69:ಸಿಎಲ್‌ಎಂ: 2001 ದಿನಾಂಕ: 21.11.2001ರ ರೀತ್ಯಾ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಸಿ.ಎ. ನಾಗರಾಜು ಉರುಫ್ ಸಿ.ಎ. ನಾಗರಾಜಯ್ಯ, ಚಿಕ್ಕನಹಳ್ಳಿ ಇವರ ತಂದೆ ಸಿ.ಎಂ. ಅಶ್ವಥಯ್ಯ ಬಿನ್ ಮೂಡ್ಲಯ್ಯ ಇವರ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಗಳನ್ನು ವಾದಿ ಸಂಘದ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಮೂನೆ 8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್**

**ಸ್ಥಿರಾಸ್ತಿ ವರ್ಗಾವಣೆಗೆ ಒಳಪಟ್ಟ ಸ್ಥಿರ ಸ್ವತ್ತುಗಳ ತಪಶೀಲು**

| ಕ್ರ. ಸಂ. | ಸಾಲ ತೆಗೆದುಕೊಂಡಿರುವವರ ಸ್ವಾಮ್ಯ ಹಕ್ಕು ಬಾಧ್ಯತೆ (ದುರುಪಯೋಗ ಮಾಡಿರುವ ನೌಕರನ ತಂದೆ) | ಗ್ರಾಮ | ಹೋಬಳಿ | ತಾಲ್ಲೂಕು | ಸರ್ವೆ ನಂ. | ವಿಸ್ತೀರ್ಣ ಎ.ಗುಂ | ತರಹೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 240:2 | 0.29 | ತರಿ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 2. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 241:1 | 0.23 | ತರಿ |
| 3. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 242:1 | 0.34 | ತರಿ |
| 4. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 255:1 | 0.30 | ತರಿ |

**ಚೆಕ್ಕುಬಂದಿ:**

| ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|
| ಗಿರಿಯಪ್ಪ ಬಿನ್ ತಿಮ್ಮಯ್ಯ | ನಾಗಣ್ಣ ಬಿನ್ ಉದ್ದಯ್ಯ ಮತ್ತು ಹೆಚ್. ರಂಗಪ್ಪ ಬಿನ್ ಉಲ್ಲಪ್ಪ | ಸರ್ಕಾರಿ ನೀಲಹಳ್ಳಿ ಮತ್ತು ಸಿ.ಪಿ. ಮೂರ್ತಿ ಬಿನ್ ಹನುಮಂತಯ್ಯ | ಸಿ. ಪಿ. ಮೂರ್ತಿ ಬಿನ್ ಹನುಮಂತಯ್ಯ ಸಿ. ಸಿ. ನಾಗರಾಜು ಬಿನ್ ಚಿಕ್ಕಣ್ಣ |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2004ನೇ ಇಸವಿ ಮೇ ತಿಂಗಳು 19 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

## ನಮೂನೆ-8

### (ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ನಿಬಂಧನೆ 38ಎ ನೋಡಿ)

### ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101ರ ಅನ್ವಯ ಪರಭಾರೆಯ ಬಗ್ಗೆ

### ಪ್ರಮಾಣ ಪತ್ರ

ತುಮಕೂರು ಜಿಲ್ಲಾ ಕೊರಟಗೆರೆ ತಾಲ್ಲೂಕು ಹಾಲು ಉತ್ಪಾದಕರ ಸಹಕಾರ ಸಂಘ ನಿ ಬೈಚಾಪುರ ಇದರ ಕಾರ್ಯದರ್ಶಿ ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಸಿ. ಎ. ನಾಗರಾಜು ಉರುಫ್ ಸಿ. ಎ. ನಾಗರಾಜಯ್ಯ ಇವರ ತಂದೆ ಸಿ. ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ, ಚಿಕ್ಕನಹಳ್ಳಿ, ಹೊಳವನಹಳ್ಳಿ ಹೋಬಳಿ, ಕೊರಟಗೆರೆ ತಾಲ್ಲೂಕು ಇವರ ಸ್ಥಿರ ಸ್ವತ್ತುಗಳ ಮಾರಾಟದ ಬಗ್ಗೆ ದಿನಾಂಕ: 17.3.03 ರಂದು ಬಹಿರಂಗ ಹರಾಜು ಇಟ್ಟಿದ್ದು, ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತುಗಳನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತುಗಳಲ್ಲಿ ಡಿಕ್ರಿಬಾಕಿದಾರರ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಬೈಚಾಪುರ, ಕೊರಟಗೆರೆ ತಾಲ್ಲೂಕು ಈ ಸಂಘದಲ್ಲಿ ನಿರ್ದಿಷ್ಟವಾಗಿರತಕ್ಕದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಹಾಲು ಉತ್ಪಾದಕರ ಸಹಕಾರ ಸಂಘ ನಿ, ಬೈಚಾಪುರ, ಕೊರಟಗೆರೆ ತಾಲ್ಲೂಕು ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101 ಬಿ ಪ್ರಕರಣದ ಅನ್ವಯ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಕೊರಟಗೆರೆ ಈ ನ್ಯಾಯಾಲಯದಲ್ಲಿ ಓಎಸ್‌ನಂ.98/2003ರ ರೀತಿ ದಾಖಲಾಗಿ ದಿನಾಂಕ: 3.11.03 ರಂದು ತೀರ್ಪು ನೀಡಿರುವುದನ್ನು ಗಮನಿಸಿ, ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ**

| ಕ್ರ. ಸಂ. | ಖಾತೆದಾರನ ಹಕ್ಕುದಾರನ ಹೆಸರು | ಗ್ರಾಮ | ಹೋಬಳಿ | ತಾಲ್ಲೂಕು | ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|---|---|
| 1. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 240:2 | 0.29 | ತರಿ |
| 2. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 241:1 | 0.23 | ತರಿ |
| 3. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 242:1 | 0.34 | ತರಿ |
| 4. | ಸಿ.ಎಂ. ಅಶ್ವತ್ಥಯ್ಯ ಬಿನ್ ಮೂಡ್ಲಯ್ಯ | ಚಿಕ್ಕನಹಳ್ಳಿ | ಹೊಳವನಹಳ್ಳಿ | ಕೊರಟಗೆರೆ | 255:1 | 1.30 | ತರಿ |

**ಚೆಕ್ಕುಬಂದಿ:**

| ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|
| ಗಿರಿಯಪ್ಪ ಬಿನ್ ತಿಮ್ಮಯ್ಯ | ನಾಗಣ್ಣ ಬಿನ್ ಉದ್ದಯ್ಯ ಮತ್ತು ಹೆಚ್. ರಂಗಪ್ಪ ಬಿನ್ ಉಲ್ಲಪ್ಪ | ಸರ್ಕಾರಿ ನೀಲಹಳ್ಳ ಮತ್ತು ಸಿ.ಪಿ. ಮೂರ್ತಿ ಬಿನ್ ಹನುಮಂತಯ್ಯ | ಸಿ. ಪಿ. ಮೂರ್ತಿ ಬಿನ್ ಹನುಮಂತಯ್ಯ ಸಿ. ಸಿ. ನಾಗರಾಜು ಬಿನ್ ಚಿಕ್ಕಣ್ಣ |

**ಷರತ್ತು ಮತ್ತು ನಿಯಮಗಳು**

1. ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವೇ ಉಪಯೋಗಿಸತಕ್ಕದ್ದು

2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಗಳ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3. ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಸಂಘಕ್ಕೆ ಜಮಾ ಖರ್ಚು ಮಾಡಿಕೊಳ್ಳತಕ್ಕದ್ದು.

**ಟಿ. ಮುರಳೀಕೃಷ್ಣಪ್ಪ**

ಪಿ.ಆರ್.1134 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಚಿಕ್ಕಮಗಳೂರು**

**ಪ್ರಕಟಣೆ**

**ಸಂಖ್ಯೆ: ಜಿಸಕಅ:ಎಸ್‌ಡಬ್ಲ್ಯೂ:7:ಸಿಆರ್:2:04-05 ದಿನಾಂಕ: 27ನೇ ಜುಲೈ 2004**

**ವಿಷಯ :** ಪ. ಜಾತಿಗೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಕುರಿತು.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68:ಎಸ್‌ಡಬ್ಲ್ಯೂಎ: 89: ದಿನಾಂಕ: 2.11.1990.

ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಪ:ಜಾತಿಗೆ ಸೇರಿದ ಕಾನೂನು ಪದವೀಧರರಿಗೆ 2004-05ನೇ ಸಾಲಿಗೆ ಆಡಳಿತ ನ್ಯಾಯಾಧಿಕರಣದಲ್ಲಿ ನಾಲ್ಕು ವರ್ಷದ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ವಿದ್ಯಾರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಕರೆಯಲಾಗಿದೆ. ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಹೊಂದಿರಬೇಕು.

1. ಅಭ್ಯರ್ಥಿಗಳು ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು.
2. ಈ ಅಭ್ಯರ್ಥಿಗಳು ಆಡಳಿತದ ನ್ಯಾಯಾಧಿಕರಣದಲ್ಲಿ ವೃತ್ತಿಯನ್ನು ಕೈಗೊಳ್ಳಲು ಅರ್ಹತೆ ಹೊಂದುವ ಕಾನೂನು ಪದವಿಯನ್ನು ಪಡೆದಿರಬೇಕು.
3. ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮೂಲಕ ಅಭ್ಯರ್ಥಿಯನ್ನು ಸಂದರ್ಶನಕ್ಕೆ ಕರೆದು ಆಯ್ಕೆ ಮಾಡಲಾಗುವುದು ಹಾಗೂ ಅವರನ್ನು ನಾಲ್ಕು ವರ್ಷದ ತರಬೇತಿಗೆ ಸರ್ಕಾರಿ ಅಭಿಯೋಜಕರ ಬಳಿ ತರಬೇತಿಗೆ ನಿಯೋಜಿಸಲಾಗುವುದು.
4. ಈ ತರಬೇತಿಯ ಅವಧಿಯಲ್ಲಿ ಹಾಜರಾತಿ ಹಾಗೂ ದಿನಚರಿಯನ್ನು ಪಡೆದು ಅದನ್ನು ಪರಿಶೀಲಿಸಿ ಪ್ರತಿ ತಿಂಗಳು ರೂ.1,000-00 (ಒಂದು ಸಾವಿರ) ತರಬೇತಿ ಭತ್ಯೆಯನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.
5. ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ಧರಾಗಿರುವ ಬಗ್ಗೆ ತರಬೇತಿಯನ್ನು ಮಧ್ಯದಲ್ಲೇ ಬಿಡದಿರುವ ಬಗ್ಗೆ ಒಂದು ಮುಚ್ಚಳಿಕೆ ಪತ್ರವನ್ನು 15 ರೂ.ಗಳ ಛಾಪಾ ಕಾಗದದ ಮೇಲೆ ಬರೆದು ಕೊಡಬೇಕು.
6. ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ದ್ವಿಪ್ರತಿಯಲ್ಲಿ ಕೊನೆಯ ದಿನಾಂಕದೊಳಗೆ ಭರ್ತಿ ಮಾಡಿ ಎಸ್.ಎಸ್.ಎಲ್.ಸಿ. ಗೆ ಮೇಲ್ಪಟ್ಟ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿ, ಜಾತಿ ದೃಢೀಕರಣ ಪತ್ರಗಳನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಲು ಬೇಕಾಗುವ ಬಾರ್ ಕೌನ್ಸಿಲ್‌ನ ನೋಂದಣಿ ಪ್ರಮಾಣ ಪತ್ರದ ಪ್ರತಿಯೊಂದಿಗೆ ಅರ್ಜಿ ಸಲ್ಲಿಸಬೇಕು.
7. ಅರ್ಜಿ ಸಲ್ಲಿಸುವ ದಿನಾಂಕಕ್ಕೆ 2 ವರ್ಷಗಳ ಒಳಗೆ ಕಾನೂನು ಪದವಿಯನ್ನು ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಮಾತ್ರ ಅರ್ಹರಾಗಿರುತ್ತಾರೆ.
8. ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 35 ವರ್ಷವನ್ನು ಮೀರಿರಬಾರದು.
9. ಆಯ್ಕೆಯಾದ ಅಭ್ಯರ್ಥಿಯು ಯಾವುದೇ ನೌಕರಿಯಲ್ಲಿರಬಾರದು ಅಥವಾ ತರಬೇತಿ : ಸರ್ಕಾರಿ ಖಾಸಗಿ ಸೇವೆಗಳಲ್ಲಿ ಸೇರಿರಬಾರದು.
10. ಪೂರ್ತಿಯಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಕಾರ್ಯದರ್ಶಿ, ಜಿಲ್ಲಾ ಮಟ್ಟದ ಆಯ್ಕೆ ಸಮಿತಿ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ದಿನಾಂಕ: 27.8.2004 ಸಂಜೆ: 5.00 ಗಂಟೆಯೊಳಗಾಗಿ ತಲುಪಿಸಬೇಕು.
11. ನಿಗದಿತ ನಮೂನೆಯ ಅರ್ಜಿ ಫಾರಂಗಳನ್ನು ಈ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆದುಕೊಳ್ಳಬಹುದು.

ಪಿ.ಆರ್.1136 ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ.

**DEPARTMENT OF COMMERCIAL TAXES**

**Office of the Assistant Commissioner of Commercial Taxes,**

**District VI Circle, II Floor, Rathnam Plaza, Margosa Road, Malleswaram, Bangalore-560003.**

**NOTIFICATION**

**No. 04-05, Bangalore, dated: 5th August 2004**

It is hereby notified to the notice of general public that a Form-C bearing No. **TCK** 1100816 issued to M/s. **DEEPU BATTERIES,** No. C 73, 2nd Stage, Peenya Industrial Estate, Bangalore-560 058, registered under CST Act, 1956 with Registration No. 72165005 in this office has been lost.

Any persons attempting to use the said statutory Form-C are themselves responsible for its further consequences.

Addl. Asst. Commr. of Comml. Taxes,
Dist 6th Circle, Bangalore.

PR-1125

**DEPARTMENT OF COMMERCIAL TAXES**

**Office of the Assistant Commissioner of Commercial Taxes,**

**District VI Circle, II Floor, Rathnam Plaza, Margosa Road, Malleswaram, Bangalore-560003.**

**NOTIFICATION**

**No. 04-05, Bangalore, dated: 5th August 2004**

It is hereby notified to the notice of general public that a Form-C bearing No. **CC 045845** issued to M/s. **SEDVIK INDUSTRIES,** No. 31, Pete Channappa Industrial Estate, Kamakshipalya, Bangalore-560 079, registered under CST Act, 1956 with Registration No. 72150609 in this office has been lost.

Any persons attempting to use the said statutory Form-C are themselves responsible for its further consequences.

PR-1135 Addl. Asst. Commr. of Comml. Taxes, Dist 6th Circle, Bangalore.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣಪ್ರಕರಣ ಸಂಖ್ಯೆ: ಕಾಅಕೊ:ಕಾನಪ: 98-2004 ದಿನಾಂಕ: 29ನೇ ಜುಲೈ 2004**

**ಪ್ರಕಟಣೆ**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿ** |
|---|---|---|
| 1. ಸದಾಶಿವ ಹರಿಬಾ ಬಂಡಗಾರ, **ವಾಸ:** ಡೋಮನಾಳ ತಾ: ಜಿಲ್ಲೆ: ಬಿಜಾಪೂರ ಹಾಗೂ ಇತರೆ ಒಬ್ಬರು. | | 1. ಬಾಲಾಜಿಂದರ ಸಿಂಗ ಸಚ್ಚಸಿಂಗ್, 202, ರಾಮ ಕಮರ್ಷಿಯಲ್ ಸೆಂಟರ್ ಎಂಎಫ್‌ಸಿಓ ರೋಡ್ ಸೆಕ್ಟರ್-68, ವಾಸಿ, ಹೊಸ ಮುಂಬಯಿ ಜಿಲ್ಲೆ: ಥಾಣೆ-40061 (ಮಹಾರಾಷ್ಟ್ರ ರಾಜ್ಯ) |
| | | 2. ದಿ-ನ್ಯೂ ಇಂಡಿಯಾ ಅಸ್ಯೂರೆನ್ಸ್ ಕಂ. ಲಿ., ಹಣಮಶೆಟ್ಟಿ ಬಿಲ್ಡಿಂಗ್, ಗುರುಕುಲರೋಡ್, ಬಿಜಾಪುರ. |

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಮೃತ ಕಾಮಗೊಂಡ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 7.7.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಸದಾಶಿವ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.1145 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಮರಣಪ್ರಕರಣ ಸಂಖ್ಯೆ: ಕಾಅಬಿ-2:ಕಾನಪ: 74:2004 ದಿನಾಂಕ: 1ನೇ ಜೂನ್ 2004**

**ಪ್ರಕಟಣೆ**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಮನೀಸಾ ಉರ್ಫ್ ಮೀನಾಬಾಯಿ ಹಣುಮಂತ ಕಾಮತ್ (ಇತರೆ ಇಬ್ಬರು) **ವಾಸ:** ಯಮಾಯಿ ಶಿವರಾಯಿ ತಾ: ಪಾಂಡುರಂಗ ಜಿಲ್ಲೆ: ಪುಣೆ, | | 1. ದಶರಥ ದಿನಕರ ಜಾಧವ, **ವಾಸ:** ಎಸ್‌ಆರ್‌ನಂ. 168, ಸತ್ಯಪುರಂ ಸೊಸಾಯಿಟಿ ಪುಣೆ, ಸಾಸವಾಡ ರೋಡ್, ತಾ: ಹವೇಲಿ, ಪುರಸಂಗಿ, ಪುಣೆ (ಮಹಾರಾಷ್ಟ್ರ ರಾಜ್ಯ) |
| | | 2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಎಸ್. ಎಸ್. ಫ್ರಂಟ ರೋಡ್, ಬಿಜಾಪೂರ. |

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಮೃತ ಹಣುಮಂತ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 18.05.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಮನಿಸಾ ಉರ್ಫ್ ಮೀನಾಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.1146 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು,

ಸಂಖ್ಯೆ:ಉಅಸಂ.ಅಸಂದ.ಅಅಪ್ರ.71A.262/00-01 ದಿನಾಂಕ: 7th August 2004

ಶ್ರೀಗಂಧ ಕಳ್ಳ ಸಾಗಾಣಿಕೆ ವಾಹನದ ಬಗ್ಗೆ

ಸಂಕ್ಷಿಪ್ತ ಜಾಹಿರಾತು ಪ್ರಕಟಣೆ

ಅಕ್ರಮ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸುತ್ತಿದ್ದ ಮಾರುತಿ-800 ಕಾರನ್ನು ಅರಣ್ಯ ಸಂಚಾರಿದಳ, ಬೆಂಗಳೂರು ಕಛೇರಿಯಿಂದ ಈ ಕೆಳಕಂಡ ವಾಹನವನ್ನು ಶ್ರೀಗಂಧ ಮರದ ತುಂಡುಗಳನ್ನು ಅಕ್ರಮವಾಗಿ ಕಳ್ಳಸಾಗಾಣಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ದಿನಾಂಕ:2/2/2001, ರಂದು ವಶಪಡಿಸಿಕೊಂಡು ಮೊಕದ್ದಮೆ ಸಂಖ್ಯೆ:262/00-01, ನ್ನು ದಾಖಲಿಸಲಾಗಿದೆ. ಸದರಿ ಮಾರುತಿ 800 ಕಾರಿನ ವಾಹನದಲ್ಲಿ ಅನಧಿಕೃತವಾಗಿ ಇನ್ನೂ ಎರಡು ವಾಹನ ನೊಂದಣಿ ಸಂಖ್ಯೆಗಳ ನಾಮಫಲಕಗಳಿರುವುದರಿಂದ ಗೊಂದಲ ನಿವಾರಣೆಗೆ ಈ ಕೆಳಗೆ ಮಾಹಿತಿ ನೀಡಿದ ವಾಹನದ ವಾರಸುದಾರರು ಯಾರಾದರೂ ಇದ್ದಲ್ಲಿ ಈ ಪ್ರಕಟಣೆಯು ದೈನಂದಿನ ಪತ್ರಿಕೆಯಲ್ಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸದೊಳಗಾಗಿ ಸೂಕ್ತ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗುವುದು. ತಪ್ಪಿದಲ್ಲಿ ವಾಹನದ ವಾರಸುದಾರರು ಯಾರು ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆಯಲ್ಲಿನ ಕಲಂಗಳಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮುಂದಿನ ಕ್ರಮ ಜರುಗಿಸಲಾಗುವುದು. ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಅರಣ್ಯ ಅಪರಾಧ ಸಂಖ್ಯೆ ಮತ್ತು ದಿನಾಂಕ | ನೊಂದಣಿ ಸಂಖ್ಯೆ | ವಾಹನದ ವಿವರ |
|---|---|---|---|
| 1 | ಅರಣ್ಯ ಅಪರಾಧ ಸಂಖ್ಯೆ:262/00-01, ದಿನಾಂಕ:2/2/2001. | ಕೆಎ-18-M-1821, ಅಥವಾ | ಬಿಳಿ ಬಣ್ಣದ ಮಾರುತಿ ಕಾರ್ 800 ಚಾಸ್ಸಿ ನಂ.295248, ಇಂಜಿನ್ ನಂಬರ್:B-308-1N218131 |
| | ಅರಣ್ಯ ಅಪರಾಧ ಸಂಖ್ಯೆ:262/00-01, ದಿನಾಂಕ:2/2/2001. | ಕೆಎ-16-M-2136, ಅಥವಾ | ಬಿಳಿ ಬಣ್ಣದ ಮಾರುತಿ ಕಾರ್ 800 ಚಾಸ್ಸಿ ನಂ.295248, ಇಂಜಿನ್ ನಂಬರ್:B-308-1N218131 |
| | ಅರಣ್ಯ ಅಪರಾಧ ಸಂಖ್ಯೆ:262/00-01, ದಿನಾಂಕ:2/2/2001. | MH-05-A-6759, | ಬಿಳಿ ಬಣ್ಣದ ಮಾರುತಿ ಕಾರ್ 800 ಚಾಸ್ಸಿ ನಂ.295248, ಇಂಜಿನ್ ನಂಬರ್:B-308-1N218131 |

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1162

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ, ಬೆಂಗಳೂರು ರವರ ನ್ಯಾಯಾಲಯ

ಎಫ್.ಓ.ಸಿ. ಸಂಖ್ಯೆ:97/99-00 ದಿನಾಂಕ:21/9/1999

ಸಂಖ್ಯೆ:ಎವಿ.ಅಅಪ್ರ.71A.97/99-00, ದಿನಾಂಕ: 20th December 2003

ಉಪಸ್ಥಿತರು : ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಫಿರ್ಯಾದಿ : ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಅರ್ಜಿದಾರರು : ಆರೋಪಿಗಳು : ಇರುವುದಿಲ್ಲ.

ಪ್ರಕರಣ ಮುಖ್ಯಾಂಶಗಳು:

ದಿನಾಂಕ: 21/9/1999 ರಂದು ಬೆಂಗಳೂರು ಅರಣ್ಯ ಸಂಚಾರಿದಳದ ಕಛೇರಿಗೆ ದೂರವಾಣಿ ಮುಖಾಂತರ ಬಂದ ದೂರಿನ ಮೇರೆಗೆ, ಬೆಂಗಳೂರು ಅರಣ್ಯ ಸಂಚಾರಿದಳದ ವಲಯ ಅರಣ್ಯ ಅಧಿಕಾರಿ ಹಾಗೂ ಸಿಬ್ಬಂದಿಯವರು ಎಸ್.ಆರ್.ಐ, ಎನ್.ಡಿ.ಆರ್.ಐ, 'ಓ' ಟೈಪ್ ಕ್ವಾರ್ಟರ್ಸ್, ಆಡುಗೋಡಿ ಇಲ್ಲಿಗೆ ಭೇಟಿ ಕೊಟ್ಟು ಸ್ಥಳ ಪರಿಶೀಲಿಸಲಾಗಿ ಸದರಿ ಮನೆಯ ಮುಂಭಾಗದಲ್ಲಿನ ಆವರಣದಲ್ಲಿ ಒಂದು ಶ್ರೀಗಂಧದ ಮರವು ಗಾಳಿ ಹಾಗೂ ಮಳೆ ಹೊಡತಕ್ಕೆ ಸಿಕ್ಕಿ ಮುರಿದು ಬಿದ್ದಿರುವುದು ಕಂಡು ಬಂದು ಮಹಜರ್ ಕ್ರಮ ಜರುಗಿಸಿ ಮುರಿದು ಬಿದ್ದಿದ್ದ ಮರವನ್ನು ಮೂರು ಶ್ರೀಗಂಧದ ಮರದ ತೊಗಟೆಯುಳ್ಳ ತುಂಡುಗಳನ್ನಾಗಿ ಪರಿವರ್ತಿಸಿ ಸರ್ಕಾರದ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಪ್ರಕರಣ 85 ರ ಪ್ರಕಾರ ಸದರಿ ಶ್ರೀಗಂಧದ ಮರವು ಸರ್ಕಾರಿ ಸ್ವತ್ತಾದ್ದರಿಂದ ಹಾಗೂ ಸದರಿ ಮನೆ ಮಾಲೀಕರು ಈ ಮರದ ಬಗ್ಗೆ ಈ ಹಿಂದೆ ಇಲಾಖೆ ಕಾನೂನಿನ ಪ್ರಕಾರ ಘೋಷಿಸಿಕೊಳ್ಳದೇ ಇರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ರ 71A ಪ್ರಕಾರ ಈ ಮೂರು ಶ್ರೀಗಂಧದ ಮರದ ತುಂಡುಗಳನ್ನು ಸರ್ಕಾರದ ಪರ ವಶಕ್ಕೆ ತೆಗೆದುಕೊಳ್ಳಲು ಕೋರಿರುವುದರ ಹಿನ್ನೆಲೆ ಆಧಾರಿಸಿ ಈ ಕೆಳಗಿನಂತೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ತೊಗಟೆ ಸಹಿತವಿರುವ ಮೂರು ಶ್ರೀಗಂಧದ ಮರದ ತುಂಡುಗಳನ್ನು ಮನೆಯ ಮಾಲೀಕರು ಸದರಿ ಮರದ ಬಗ್ಗೆ ಕಾನೂನು ರೀತ್ಯಾ ಈ ಹಿಂದೆ ಸರ್ಕಾರಕ್ಕೆ ಘೋಷಣೆ ಮಾಡಿಕೊಳ್ಳದೇ ಇರುವುದರಿಂದ ಸದರಿ ಮರದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕಃ 20/12/2003. ರಂದು ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1172

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ.

ಎಫ್.ಓ.ಸಿ. ಸಂಖ್ಯೆಃ197/97-98 ದಿನಾಂಕಃ5/2/98

ಸಂಖ್ಯೆಃಎ೨.ಅಅಪ್ರ.71A.197/97-98, ದಿನಾಂಕಃ 15th March 2004

| | | |
|---|---|---|
| ಉಪಸ್ಥಿತರು | ಃ | ಶ್ರೀ.ಎಂ.ಕೃಷ್ಣಪ್ಪ, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು. |
| ಫಿರ್ಯಾದಿ | ಃ | ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು. |
| ಅರ್ಜಿದಾರರು ಃ ಆರೋಪಿಗಳು | ಃ | ಇರುವುದಿಲ್ಲ. |

ಪ್ರಕರಣ ಮುಖ್ಯಾಂಶಗಳುಃ

ದಿನಾಂಕಃ5/2/98 ರಂದು ಬೆಂಗಳೂರು ಅರಣ್ಯ ಸಂಚಾರಿದಳದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಮತ್ತು ಸಿಬ್ಬಂದಿಯವರು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ದೊಡ್ಡಬಳ್ಳಾಪುರ ಮತ್ತು ಅಬಕಾರಿ ಇಲಾಖೆ, ಪೋಲೀಸ್ ಇಲಾಖೆಯ ಕೆಲವು ಅಧಿಕಾರಿಗಳು ಹಾಗೂ ಸಿಬ್ಬಂದಿಯವರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಹೊಸಕೋಟೆ ತಾಲ್ಲೂಕಿನ ಮೆಠಿಮಲ್ಲಸಂದ್ರದಿಂದ ಚಿಕ್ಕತಿರುಪತಿಗೆ ಹೋಗುವ ರಸ್ತೆಯ ಎಡ ಭಾಗದ ರಸ್ತೆ ಮೇಠಿ ಮಲ್ಲಸಂದ್ರ ಸಮೀಪದ ಸರ್ಕಾರಿ ನೀರು ಕಾಲುವೆಯ ಬಳಿ ಕೆಲವು ಕುರುಚಲು ಗಿಡಗಳ ಬಳಿ ಜಂಟಿಯಾಗಿ ಪರಿಶೀಲನೆ ಮಾಡಿನೋಡಲಾಗಿ ಕಂಡು ಬಂದಂತೆ ಎರಡು ಬಿಳಿ ಬಣ್ಣದ ಪ್ಲಾಸ್ಟಿಕ್ ಚೀಲಗಳಲ್ಲಿ ಶ್ರೀಗಂಧದ ಚಕ್ಕೆ ಮತ್ತು ತುಂಡುಗಳನ್ನು ತುಂಬಿ ಗೋಣಿದಾರದಿಂದ ಚೀಲಗಳನ್ನು ಹೊಲಿದು ಬಚ್ಚಿಟ್ಟಿದ್ದು, ಪತ್ತೆಯಾಗಿದ್ದು, ಅಲ್ಲಿಗೆ ಪಂಚಾಯಿತಿದಾರರನ್ನು ಬರ ಮಾಡಿಕೊಂಡು ಮಾಹಿತಿಗಳನ್ನು ತೋರಿಸಿ, ವಿಚಾರಣೆ ಮಾಡಿ ನೋಡಲಾಗಿ ಸದರಿ ಶ್ರೀಗಂಧ ತುಂಬಿದ ಮೂಟೆಗಳನ್ನು ಯಾರು ಇಟ್ಟಿದ್ದಾರೆ ಎಂಬುದರ ಬಗ್ಗೆ ವಿಚಾರಿಸಲಾಗಿ ಅಲ್ಲಿದ್ದವರು ಯಾರು ಎಂಬುದು ಗೊತ್ತಿಲ್ಲವೆಂದು ತಿಳಿಸಿದ ಮೇರೆಗೆ ಕರ್ನಾಟಕ ಅರಣ್ಯ ಕಾಯ್ದೆ ಕಲಂ 80,84,87,71A to G, 114 ಮತ್ತು ನಿಯಮ 144, ಪ್ರಕಾರ ಸದರಿ ಶ್ರೀಗಂಧವನ್ನು ಸರ್ಕಾರಕ್ಕೆ ವಶಪಡಿಸಿಕೊಂಡು ಮೊಕದ್ದಮೆ ಸಂಖ್ಯೆಃ197/97-98 ನ್ನು ದಾಖಲಾಗಿಸಿ ಕೊಳ್ಳಲಾಗಿತ್ತು, ಪ್ರಕರಣದಲ್ಲಿ ಅಪರಾಧಿಗಳು ಯಾರೆಂದು ಪತ್ತೆಯಾಗದೇ ಇರುವುದರಿಂದ ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಶ್ರೀಗಂಧದ ಚಕ್ಕೆ ಮತ್ತು ತುಂಡುಗಳು ಸೇರಿ ಒಟ್ಟು 45 ಕೆಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ವಿಚಾರಣಾಧಿಕಾರಿಯವರು ಕೋರಿರುವುದರಿಂದ. ಮೇಲ್ಕಂಡ ಎಲ್ಲಾ ವಿಷಯಗಳನ್ನು ಅವಲೋಖಿಸಿ ಪರಿಶೀಲಿಸಿ ನೋಡಿ ಈ ಕೆಳಕಂಡಂತೆ ಆದೇಶಿಸಿದೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 2(7a), 80 84,87, 71A ರಡಿ ಹಾಗೂ ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ 144 ರಡಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಶ್ರೀಗಂಧದ ಚಕ್ಕೆ ಮತ್ತು ತುಂಡುಗಳ ಒಟ್ಟು 45 ಕೆಜಿ ಶ್ರೀಗಂಧವನ್ನು ಯಾರು ಅಪರಾಧಿಗಳು ಪತ್ತೆಯಾಗದೇ ಇರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕಃ 15/3/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1173

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ
ಎಫ್.ಓ.ಸಿ. ಸಂಖ್ಯೆ:46/99-00 ದಿನಾಂಕ:3/7/99
ಸಂಖ್ಯೆ:ಎ೨.ಅಅಪ್ರ.71A.46/99-00, ದಿನಾಂಕ: 15th March 2004

ಉಪಸ್ಥಿತರು : ಶ್ರೀ.ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.
ಫಿರ್ಯಾದಿ : ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.
ಅರ್ಜಿದಾರರು : ಆರೋಪಿಗಳು : ಇರುವುದಿಲ್ಲ.

ಪ್ರಕರಣ ಮುಖ್ಯಾಂಶಗಳು:

ದಿನಾಂಕ:3/7/1999 ರಂದು ನಿಸ್ತಂತ್ತುವಿನಲ್ಲಿ ಬಂದ ಖಚಿತ ವರ್ತಮಾನದ ಮೇರೆಗೆ ಬೆಂಗಳೂರು ಅರಣ್ಯ ಸಂಚಾರಿದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ವಲಯ ಅರಣ್ಯ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಬೆಂಗಳೂರಿನ, ನಾಗರಬಾವಿ 2 ನೇ ಹಂತ, ಬಿಡಿಎ ಪಾರ್ಕಿನ ಎದುರುಗಡೆ ಇರುವ ಮನೆ ನಂ.159 ರ ಬಳಿ ಹೋಗಿ ಅಜಮಾಯಿಸಿ ನೋಡಲಾಗಿ ಸದರಿ ಮನೆಯು ಒಂಟಿ ಮನೆಯಾಗಿದ್ದು ಸುತ್ತಲೂ ಖಾಲಿ ನಿವೇಶನಗಳು ಇದ್ದು, ಅದರ ಮುಂದೆ ದೊಡ್ಡ ಮೋರಿ ಇರುತ್ತದೆ, ಮುಂದುವರೆದು ಮನೆಯ ಸುತ್ತಲು ನೋಡಲಾಗಿ ಕಾಂಗ್ರೇಸ್ ಗಿಡ ಗೆಂಟೆಗಳು ಬೆಳೆದಿದ್ದು, ಮನೆಯ ಸುತ್ತಲು ತಂತಿ ಬೇಲಿ ನಿರ್ಮಿಸಿದ್ದು, ಬೇಲಿಯ ಪಕ್ಕದಲ್ಲಿ ಮರದ ತುಂಡುಗಳು ಬಿದ್ದಿರುವುದು ಕಂಡು ಬಂದಿರುತ್ತವೆ ಕೂಡಲೇ ಸದರಿ ಮರಗಳ ತುಂಡುಗಳ ಚಕ್ಕೆಗಳ ಗುಣ ಲಕ್ಷಣಗಳನ್ನು ಪರೀಕ್ಷಿಸಿ ನೋಡಿದಾಗ ಸದರಿ ಮರದ ತುಂಡುಗಳು ಶ್ರೀಗಂಧದ ಮರದ ತುಂಡುಗಳಾಗಿರುವುದು ಖಚಿತವಾಗಿ ಕಂಡು ಬಂದಿದ್ದು, ನಂತರ ಸದರಿ ಸ್ಥಳಕ್ಕೆ ಪಂಚಾಯ್ತಿದಾರರನ್ನು ಕರೆಯಿಸಿ ಬೇಲಿಯ ಬಳಿ ಇರುವ ಶ್ರೀಗಂಧದ ತುಂಡುಗಳನ್ನು ತೋರಿಸಿ ಪಂಚಾಯಿತಿದಾರರ ಜೊತೆ ಸಿಬ್ಬಂದಿಯವರೂ ಸಹಾ ಸೇರಿ ಮಹಜರ್ ನಡೆಸಲಾಯಿತು. ಸದರಿ ಮನೆಯು ಶ್ರೀ.ಕೃಷ್ಣಮೂರ್ತಿಯವರಿಗೆ ಸೇರಿದ್ದು, ಮನೆಯನ್ನು ಬಾಡಿಗೆಗೆ ಶ್ರೀ.ಸಂಜಯ ಹೆಗ್ಡೆ, ಉಡುಪಿ ಹಾಗೂ ಇತರ ಮೂರು ಜನ ಸಹಾವಾಸಿಗರಿಗೆ ನೀಡಿದ್ದು, ಅವರುಗಳು ಬೆಂಗಳೂರಿನಲ್ಲಿ ಕಂಪ್ಯೂಟರ್ ವ್ಯಾಪಾರ ಮಾಡುವವರಿದ್ದು, ಸದರಿ ಮನೆಯಲ್ಲಿ ಜಂಟಿಯಾಗಿ ವಾಸವಿರುವುದಾಗಿ ತಿಳಿದು ಬಂದ ಮೇರೆಗೆ ಅಕ್ರಮವಾಗಿ ಶ್ರೀಗಂಧದ ಮರದ ತುಂಡುಗಳನ್ನು ದಾಸ್ತಾನು ಮಾಡಿ ಸಾಗಾಣಿಕೆ ಮಾಡುತ್ತಿರುವುದು ಅರಣ್ಯ ಅಪರಾಧವೆಂದು ವಿವರಿಸಿದಾಗ ಅವರುಗಳು ನಡೆದಿರುವ ಘಟನೆ ಬಗ್ಗೆ ಗೊತ್ತೆ ಇಲ್ಲ ಎಂದು ಹಾಗೂ ಅವರುಗಳಿಗೆ ಯಾರೋ ಕೆಲವು ವ್ಯಕ್ತಿಗಳು ದ್ವೇಷದ ಮೇಲೆ ಈ ರೀತಿ ಮಾಡಿ ಸುಳ್ಳು ದೂರು ನೀಡಿ ತೊಂದರೆ ಕೊಡಲು ಮಾಡಿರಬಹುದು ಎಂದು ತಿಳಿಸಿದ ಕಾರಣ ಅವರುಗಳ ಬಗ್ಗೆ ಸಹಾ ಅಕ್ಕಪಕ್ಕದವರನ್ನು ವಿಚಾರಿಸಲಾಗಿ ಅವರು ಅಮಾಯಕರು ಅವರು ಅಂತಹವರಲ್ಲ ಎಂದು ತಿಳಿಸಿರುತ್ತಾರೆ. ಈ ಕೃತ್ಯವು ಯಾರು ಮಾಡಿರುತ್ತಾರೆ ಎಂಬ ಬಗ್ಗೆ ಪರಿಶೀಲಿಸಿ ತನಿಖೆ ಮಾಡಲಾಗಿ ಅಪರಾಧಿಗಳು ಯಾರೆಂದು ತಿಳಿದು ಬಂದಿರುವುದಿಲ್ಲ. ಸದರಿ ಘಟನೆಯನ್ನು ಈ ಕಛೇರಿಯಲ್ಲಿ ಅಪರಾಧ ಸಂಖ್ಯೆ:46/99-00 ಎಂದು ದಾಖಲಿಸಿ ಶ್ರೀಗಂಧವನ್ನು ಕಡಿದು ಅಕ್ರಮವಾಗಿ ದಾಸ್ತಾನು ಮಾಡಿರುವ ಅಪರಾಧಗಳು ಪತ್ತೆಯಾಗಿಲ್ಲವೆಂದು ಸದರಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪ್ರಕರಣ ಮುಕ್ತಾಯಗೊಳಿಸುವಂತೆ ವಿಚಾರಣಾಧಿಕಾರಿಯವರು ಈ ಕಛೇರಿಗೆ ವಿನಂತಿಸಿದ ಮೇರೆಗೆ ಪ್ರಕರಣದ ಎಲ್ಲಾ ಹಿನ್ನೆಲೆ ಆಧರಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ತೂಗಟೆ ಹೊಂದಿದ 74 ಕೆಜಿ ಶ್ರೀಗಂಧದ ತುಂಡುಗಳನ್ನು ಯಾರು ವಾರಸುದಾರರು ಇಲ್ಲದೇ ಇರುವುದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 15/3/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1174

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ.
ಎಫ್.ಓ.ಸಿ. ಸಂಖ್ಯೆ:163/99-00, ದಿನಾಂಕ:22/1/2000
ಸಂಖ್ಯೆ:ಎ೨.ಅಅಪ್ರ.71A.163/99-00, ದಿನಾಂಕ: 21st February 2004

ಉಪಸ್ಥಿತರು : ಶ್ರೀ.ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.
ಫಿರ್ಯಾದಿ : ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.
ಅರ್ಜಿದಾರರು : ಆರೋಪಿಗಳು : ಇರುವುದಿಲ್ಲ.

ಪ್ರಕರಣ ಮುಖ್ಯಾಂಶಗಳು:

ದಿನಾಂಕ:22/1/2000 ರಂದು ಬೆಂಗಳೂರು ಅರಣ್ಯ ಸಂಚಾರಿದಳದ ಕಛೇರಿಗೆ ದೂರವಾಣಿ ಮೂಲಕ ಬಂದ ಮಾಹಿತಿ ಮೇರೆಗೆ, ಬೆಂಗಳೂರು ಅರಣ್ಯ ಸಂಚಾರಿದಳದ ವಲಯ ಅರಣ್ಯ ಅಧಿಕಾರಿ ಹಾಗೂ ಸಿಬ್ಬಂದಿಯವರು ಬೆಂಗಳೂರು ಸಿಟಿ ರೈಲ್ವೆ ನಿಲ್ದಾಣ ಪ್ಲಾಟ್ ಫಾರಂ 4 ರ ಪ್ರದೇಶದಲ್ಲಿ ಪರಿಶೀಲಿಸಿ ನೋಡಲಾಗಿ ಮೂರು ಮೂಟೆ ಗೋಣಿ ಚೀಲ ತುಂಬಿದ ಮೂಟೆಗಳು ಇರುವುದು ಕಂಡು ಬಂದು ಇದನ್ನು ಪರಿಶೀಲಿಸಿದಾಗ ಗುಳಿಮಾವು ಚಕ್ಕೆಯೆಂದು ಖಚಿತ ಪಡಿಸಿಕೊಂಡು ಸ್ಥಳದಲ್ಲಿದ್ದವರನ್ನು ವಿಚಾರಿಸಲಾಗಿ ಯಾರು ವಾರಸುದಾರರು ಇಲ್ಲದಿದ್ದು, ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಕಾಲಂಗಳಿಗೆ ವಿರುದ್ಧವಾಗಿರುವುದರಿಂದ ಪಂಚ ಸಾಕ್ಷಿಗಳ ಸಮ್ಮುಖದಲ್ಲಿ ಸದರಿ ಮೂಟೆಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:163/99-00, ದಾಖಲಾಗಿಸಿ ಕೊಂಡು ಮುಂದುವರೆದು ನೋಡಲಾಗಿ ಸದರಿ ಮೂರು ಗೋಣಿ ಚೀಲದಲ್ಲಿನ ಚಕ್ಕೆಗಳಿಗೆ ಯಾರು ವಾರಸುದಾರರು ಇಲ್ಲದೆ ಇರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ತಿದ್ದುಪಡಿ 1998 ಪ್ರಕರಣ 71ಎ ಪ್ರಕಾರ ಕ್ರಮ ಜರುಗಿಸಿ ಸದರಿ ಗುಳಿಮಾವು ಚಕ್ಕೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ವಿಚಾರಣಾಧಿಕಾರಿಯವರು ಶಿಫಾರಸ್ಸು ಮಾಡಿರುವ ಮೇರೆಗೆ ಈ ಕೆಳಗಿನಂತೆ ಆದೇಶ ನೀಡಲಾಗಿದೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ತಿದ್ದುಪಡಿ 1998 ಪ್ರಕರಣ ಕಲಂ 71A ನಿಯಮ 144 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಮೂರು ಗೋಣಿ ಚೀಲ ಗುಳಿಮಾವು ಚಕ್ಕೆಗಳು ಒಟ್ಟು 135 Kg ತೂಕ ಇರುವವುಗಳನ್ನು ಯಾರು ವಾರಸುದಾರರು ಇಲ್ಲದೇ ಇರುವ ಪ್ರಕರಣವೆಂದು ಪರಿಗಣಿಸಿ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 21/2/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1175

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ

ಎಫ್.ಓ.ಸಿ. ಸಂಖ್ಯೆ:136/96-97 ದಿನಾಂಕ:22/8/1996

ಸಂಖ್ಯೆ:ಎವಿ.ಅಅಪ್ರ.71A.136/96-97, ದಿನಾಂಕ: 28th February 2004

ಉಪಸ್ಥಿತರು : ಶ್ರೀ.ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಫಿರ್ಯಾದಿ : ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಅರ್ಜಿದಾರರು : ಆರೋಪಿಗಳು : ಇರುವುದಿಲ್ಲ.

ಪ್ರಕರಣ ಮುಖ್ಯಾಂಶಗಳು:

ದಿನಾಂಕ:22/8/1996 ರಂದು ಬೆಂಗಳೂರು ಅರಣ್ಯ ಸಂಚಾರಿದಳದ ಕಛೇರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಬೆಂಗಳೂರು ಅರಣ್ಯ ಸಂಚಾರಿದಳದ ವಲಯ ಅರಣ್ಯ ಅಧಿಕಾರಿ ಹಾಗೂ ಸಿಬ್ಬಂದಿಯವರು ಕೃಷ್ಣರಾಜಪುರ ತಾಲ್ಲೂಕು, ವಿಭೂತಿಪುರ ಗ್ರಾಮದ ಸೈಟ್ ನಂ.136/3B ಸ್ಥಳಕ್ಕೆ ಭೇಟಿ ಕೊಟ್ಟು, ಸ್ಥಳ ಪರಿಶೀಲಿಸಲಾಗಿ ಸದರಿ ಜಮೀನಿನಲ್ಲಿ ಯಾರೋ ದುಷ್ಕರ್ಮಿಗಳು ಎಂಟು ಶ್ರೀಗಂಧದ ಮರವನ್ನು ಕಡಿದಿರುವುದು ಕಂಡು ಬಂದು, ಸದರಿ ವಿಷಯಕ್ಕೆ ಮಹಜರ್ ಕ್ರಮ ಜರುಗಿಸಿ ಎಂಟು ಶ್ರೀಗಂಧದ ಮರಗಳ ಕಡಿದ ಬುಡಗಳಿಗೆ ಮಹಜರ್ ಜರುಗಿಸಿ ಕ್ರಮ ಸಂಖ್ಯೆ ನೀಡಲಾಗಿದೆ ಹಾಗೂ ಕಡಿದು ಬಿಟ್ಟಿದ್ದ ತುಂಡುಗಳನ್ನು ಸರ್ಕಾರದ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 62, 84,85,86 ಮತ್ತು ನಿಯಮ 111, 116, ರ ಪ್ರಕಾರ ಸದರಿ ಶ್ರೀಗಂಧದ ಮರವು ಸರ್ಕಾರಿ ಸ್ವತ್ತಾದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ಪ್ರಕಾರ ಈ 20 ತುಂಡುಗಳುಳ್ಳ 92 ಕೆಜಿಯ ಶ್ರೀಗಂಧವನ್ನು ಅಕ್ರಮವಾಗಿ ಕಡಿದಿರುವ ಅಪರಾಧಿಗಳು ಪತ್ತೆಯಾಗಿಲ್ಲವೆಂದು ಪ್ರಕರಣದ ವಿಚಾರಣಾಧಿಕಾರಿಯವರು ಈ ನ್ಯಾಯಾಲಯಕ್ಕೆ ವರದಿ ಸಲ್ಲಿಸಿ ಸದರಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ ಮೇರೆಗೆ ಪ್ರಕರಣದ ಹಿನ್ನೆಲೆ ಆಧಾರಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ತೊಗಟೆ ಸಹಿತವಿರುವ 20 ತುಂಡುಗಳುಳ್ಳ 92 Kg ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 28/2/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1176

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ

ಎಫ್.ಓ.ಸಿ. ಸಂಖ್ಯೆ:40/00-01 ದಿನಾಂಕ:22/6/2000

ಸಂಖ್ಯೆ:ಎವಿ.ಅಅಪ್ರ.71A.40/00-01, ದಿನಾಂಕ: 21st February 2004

ಉಪಸ್ಥಿತರು : ಶ್ರೀ.ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಫಿರ್ಯಾದಿ : ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಅರ್ಜಿದಾರರು : ಆರೋಪಿಗಳು : ಇರುವುದಿಲ್ಲ.

ಪ್ರಕರಣ ಮುಖ್ಯಾಂಶಗಳು:

ದಿನಾಂಕ:22/6/2000 ರಂದು ಬೆಂಗಳೂರು ಅರಣ್ಯ ಸಂಚಾರಿದಳದ ವಲಯ ಅರಣ್ಯ ಅಧಿಕಾರಿ ಹಾಗೂ ಸಿಬ್ಬಂದಿಯವರು ದೈನಂದಿನ ಗಸ್ತಿನಲ್ಲಿದ್ದಾಗ ಬೆಂಗಳೂರಿಗೆ ರಾಜ್ಯದ ಇತರೆ ಕಡೆಯಿಂದ ಹಾಗೂ ಹೊರ ರಾಜ್ಯದಿಂದ ಸರ್ಕಾರಿ ವಾಹನಗಳ ಮೂಲಕ ಶ್ರೀಗಂಧದ ಮರಗಳ ಕಳ್ಳಸಾಗಾಣಿಕೆಯಾಗುತ್ತದೆ ಎಂಬ ವರ್ತಮಾನ ಬಂದ ಮೇರೆಗೆ ವಲಯ ಅರಣ್ಯ ಅಧಿಕಾರಿ ಹಾಗೂ ಸಿಬ್ಬಂದಿಯವರು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಕೆಂಪೇಗೌಡ ಬಸ್ ನಿಲ್ದಾಣದ ಆಗಮನ ಭಾಗದಲ್ಲಿ ನೋಡಲಾಗಿ ಅನುಮಾನಾಸ್ಪದವಾಗಿ ಒಂದು ಸ್ಥಳದಲ್ಲಿ ಇಡಲಾಗಿದ್ದ ಎರಡು ಸೂಟ್‌ಕೇಸ್ ಹಾಗೂ ಎರಡು ಏರ್ ಬ್ಯಾಗ್‌ಗಳನ್ನು ಪರಿಶೀಲಿಸಿದಾಗ ಅದರಲ್ಲಿ ಶ್ರೀಗಂಧದ ಮರದ ತುಂಡುಗಳು ಇರುವುದು ಕಂಡು ಬಂದು ಇದು ಕರ್ನಾಟಕ ಅರಣ್ಯ ಕಾಯ್ದೆಯಲ್ಲಿ ಅಪರಾಧವೆಂದು ಪರಿಗಣಿಸಿ ಪಂಚಾಯ್ತಿದಾರರ ಮುಖಾಂತರ ಪರಿಶೀಲಿಸಿ ಮಹಜರ್ ಕ್ರಮ ಜರುಗಿಸಿ ಸೂಟ್‌ಕೇಸ್‌ಗಳು ಬೀಗ ಹಾಕಿದ್ದರಿಂದ ಅದನ್ನು ಒಡೆದು ತೆಗೆದು ನೋಡಲಾಗಿ ಅದರಲ್ಲಿ ಶ್ರೀಗಂಧದ ಮರದ ಚಕ್ಕೆಗಳು ಹಾಗೂ ಹ್ಯಾಂಡ್ ಬ್ಯಾಗ್‌ನಲ್ಲಿ ಶ್ರೀಗಂಧದ ಮರದ ಸಣ್ಣ ಸಣ್ಣ ತುಂಡುಗಳು ಇರುವುದು ಕಂಡು ಬಂದಿರುತ್ತದೆ. ಅವುಗಳನ್ನು ಪರಿಶೀಲಿಸಿ ನೋಡಲಾಗಿ ಅವು ಶ್ರೀಗಂಧದ ಮರದ ತುಂಡುಗಳಾಗಿರುತ್ತವೆ ಎಂದು ಖಾತ್ರಿ ಮಾಡಿಕೊಂಡು ಒಟ್ಟಾಗಿ ತೂಕ ಮಾಡಲಾಗಿ ಒಟ್ಟು 46 ಕೆಜಿ ತೂಕ ಇರುತ್ತದೆ. ಸದರಿ ಸ್ಥಳದಲ್ಲಿನ ಈ ಎರಡು ಸೂಟ್‌ಕೇಸ್ ಮತ್ತು ಎರಡು ಬ್ಯಾಗ್‌ಗಳ ಮಾಲಿಗೆ ವಾರಸುದಾರರು ಯಾರಾದರು ಇದ್ದಾರೆಂದು ವಿಚಾರಿಸಲಾಗಿ ಅಲ್ಲಿದ್ದ ಜನರು ಈ ಶೂಟ್‌ಕೇಸ್‌ಗಳು ಹಾಗೂ ಬ್ಯಾಗ್‌ಗಳು ತಮ್ಮದಲ್ಲವೆಂದು ಹೇಳಿದರು, ಮುಂದುವರೆದು ಇದನ್ನು ವಾರಸುದಾರರು ಯಾರು ಎಂಬುದು ತಿಳಿದಿಲ್ಲವೆಂದು ತಿಳಿಸಿರುವ ಕಾರಣ ಸದರಿ ಶ್ರೀಗಂಧದ ತುಂಡುಗಳನ್ನು ವಶಪಡಿಸಿಕೊಂಡು ಮೊಕದ್ದಮೆ ಸಂಖ್ಯೆ:40/00-01, ಅನ್ನು ದಾಖಲಾಗಿಸಿಕೊಳ್ಳಲಾಗಿತ್ತು, ಅಪರಾಧಿಗಳು ಯಾರೆಂದು ಪತ್ತೆಯಾಗದೇ ಇರುವುದರಿಂದ ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 46 ಕೆಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ವಿಚಾರಣಾಧಿಕಾರಿಯವರು ಕೋರಿರುವುದರಿಂದ. ಮೇಲ್ಕಂಡ ಎಲ್ಲಾ ವಿಷಯಗಳನ್ನು ಪರಿಶೀಲಿಸಿ ನೋಡಿ ಈ ಕೆಳಕಂಡಂತೆ ಆದೇಶಿಸಿದೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 80, 2(7a), 84, 87, 71A ರಡಿ ಹಾಗೂ ಕರ್ನಾಟಕ ಅರಣ್ಯ ನಿಯಮ 1969 ನಿಯಮ 144 ರಡಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ 46 Kg ಶ್ರೀಗಂಧದ ಮರದ ತುಂಡುಗಳನ್ನು ಯಾರು ವಾರಸುದಾರರು ಇಲ್ಲದೇ ಇರುವ ಪ್ರಕರಣವೆಂದು ಪರಿಗಣಿಸಿ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 21/2/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1177

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ.

ಎಫ್.ಓ.ಸಿ. ಸಂಖ್ಯೆ:166/96-97 ದಿನಾಂಕ:3/10/96

ಸಂಖ್ಯೆ:ಎವಿ.ಅಅಪ್ರ.71A.166/99-00, ದಿನಾಂಕ: 15th March 2004

ಉಪಸ್ಥಿತರು : ಶ್ರೀ.ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಫಿರ್ಯಾದಿ : ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು.

ಅರ್ಜಿದಾರರು : ಆರೋಪಿಗಳು : ಇರುವುದಿಲ್ಲ.

ಪ್ರಕರಣ ಮುಖ್ಯಾಂಶಗಳು:

ದಿನಾಂಕ:3/10/96 ರಂದು ಬೆಂಗಳೂರು ಉತ್ತರ ತಾಲ್ಲೂಕು ಲೊಟ್ಟೆಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ.102, ಜಮೀನಿನ ಮಾಲೀಕರಾದ ಶ್ರೀ.ಎ.ರಾಮಕೃಷ್ಣಯ್ಯನವರ ಜಮೀನಿನಲ್ಲಿದ್ದ ಒಂದು ಶ್ರೀಗಂಧದ ಮರವನ್ನು ಯಾರೋ ಅಕ್ರಮವಾಗಿ ಕಡಿತಲೆ ಮಾಡಿರುವ ಬಗ್ಗೆ ಸದರಿ ಶ್ರೀ.ಎ.ರಾಮಕೃಷ್ಣನವರು, ನೀಡಿದ ದೂರಿನ ಮೇರೆಗೆ ಈ ವಿಭಾಗದ ವಲಯ ಅರಣ್ಯ ಅಧಿಕಾರಿಯವರು ಹಾಗೂ ಸಿಬ್ಬಂದಿಯವರು ಸದರಿ ಸ್ಥಳ ಪರಿಶೀಲಿಸಿ ಅಲ್ಲಿದ್ದ ನಾಲ್ಕು ಶ್ರೀಗಂಧದ ತುಂಡುಗಳನ್ನು ಬುಡ ಸಹಿತ ಸರ್ಕಾರದ ಪರ ವಶಪಡಿಸಿಕೊಂಡು ಪಂಚಾಯಿತಿದಾರರ ಸಮ್ಮುಖದಲ್ಲಿ ಮಹಜರ್ ಕ್ರಮ ಜರುಗಿಸಿ ಈ ಕಛೇರಿಯಲ್ಲಿನ ಮೊಕದ್ದಮೆ ಸಂಖ್ಯೆ: 166/96-97, ನ್ನು ದಾಖಲಿಸಿಕೊಂಡಿದ್ದರು. ಈ ವಿಷಯದಲ್ಲಿ ಆರೋಪಿಗಳನ್ನು ಪತ್ತೆ ಹಚ್ಚುವಲ್ಲಿ ಸೂಕ್ಷ್ಮವಾಗಿ ಗಮನಿಸಿದರೂ ಯಾರು ಪತ್ತೆಯಾಗಿರುವುದಿಲ್ಲವೆಂದು ವಲಯ ಅರಣ್ಯ ಅಧಿಕಾರಿಗಳು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಈ ಪ್ರಕರಣದಲ್ಲಿ ದೊರೆತಿರುವ ಶ್ರೀಗಂಧ ಹಿಡುವಳಿ ಜಮೀನಿನಲ್ಲಿದ್ದರು ಸಹಾ ಅರಣ್ಯ ಕಾಯ್ದೆ 104(1) ನಮೂನೆ 12 ರಂತೆ ಶ್ರೀಗಂಧದ ಮಾಲೀಕತ್ವದ ಘೋಷಣೆ ಮಾಡದೇ ಇರುವುದರಿಂದ ಮಾಲಿಕರಾದ ಶ್ರೀ.ರಾಮಕೃಷ್ಣಯ್ಯ, ಇವರಿಗೆ ಪರಿಹಾರ ನೀಡುವ ಅವಕಾಶವಿರುವುದಿಲ್ಲದ್ದರಿಂದ. ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಒಂದು ಶ್ರೀಗಂಧದ ಬುಡ ಮತ್ತು ನಾಲ್ಕು ಶ್ರೀಗಂಧದ ತುಂಡುಗಳನ್ನು (35 Kg) ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ವಿಚಾರಣಾಧಿಕಾರಿಯವರು ಕೋರಿರುವುದರಿಂದ. ಮೇಲ್ಕಂಡ ಎಲ್ಲಾ ವಿಷಯಗಳನ್ನು ಪರಿಶೀಲಿಸಿ ಅವಲೋಕನ ಮಾಡಿ ಈ ಕೆಳಕಂಡಂತೆ ಆದೇಶಿಸಿದೆ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 86,87, 71A ಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಒಂದು ಶ್ರೀಗಂಧದ ಬುಡ ನಾಲ್ಕು ಶ್ರೀಗಂಧದ ತುಂಡುಗಳನ್ನೊಳಗೊಂಡ ಒಟ್ಟು 35 ಕೆಜಿ ಶ್ರೀಗಂಧವನ್ನು ಯಾರು ಅಪರಾಧಿಗಳು ಪತ್ತೆಯಾಗದೇ ಇರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 15/3/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1178

ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ

ಎಫ್.ಓ.ಸಿ. ಸಂಖ್ಯೆ:11/01-02 ದಿನಾಂಕ:17/4/2001

ಸಂಖ್ಯೆ:ಎವಿ.ಅಅಪ್ರ.71A.11/01-02, ದಿನಾಂಕ: 21st February 2004

| | | |
|---|---|---|
| ಉಪಸ್ಥಿತರು | : | ಶ್ರೀ.ಎಂ.ಕೃಷ್ಣಪ್ಪ, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು. |
| ಫಿರ್ಯಾದಿ | : | ವಲಯ ಅರಣ್ಯ ಅಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು. |
| ಅರ್ಜಿದಾರರು : ಆರೋಪಿಗಳು | : | ಇರುವುದಿಲ್ಲ. |

ಪ್ರಕರಣ ಮುಖ್ಯಾಂಶಗಳು:

ದಿನಾಂಕ:5/4/01 ರಂದು ಬೆಂಗಳೂರು ಅರಣ್ಯ ಸಂಚಾರಿದಳದ ಕಛೇರಿಗೆ ಬಂದ ಖಚಿತ ಮಾಹಿತಿ ಮೇರೆಗೆ, ಬೆಂಗಳೂರು ಅರಣ್ಯ ಸಂಚಾರಿದಳದ ವಲಯ ಅರಣ್ಯ ಅಧಿಕಾರಿ ಶ್ರೀ.ಕೆ.ನಾಗರಾಜು, ಹಾಗೂ ಸಿಬ್ಬಂದಿಯವರು ಅಪರಾಧ ನಡೆದಿದೆ ಎಂದು ಹೇಳಲಾದ ಸ್ಥಳಕ್ಕೆ ಭೇಟಿ ನೀಡಿ ಸ್ಥಳದಲ್ಲಿ ಪರಿಶೀಲಿಸಿದಾಗ ಮನೆ ಕಟ್ಟಲು ರಾತ್ರಿ ವೇಳೆ ಕೊಳವೆ ಭಾವಿ ಕೊರೆಯುವ ಸಂದರ್ಭದಲ್ಲಿ ಲಾರಿ ಚಾಲಕರು ರಾತ್ರಿ ವೇಳೆಯಲ್ಲಿ ಅವರಿಗೆ ಶ್ರೀಗಂಧದ ಮರವೆಂದು ಅರಿವಿಲ್ಲದೆ ಲಾರಿ ತಾಗಿಸಿ ಮರವನ್ನು ಜಖಂಗೊಳಿಸಿ ಉರುಳಿಸಿರುವುದು ನಿಜವೆಂದು ನಿವೇಶದ ಮಾಲೀಕರಾದ ಶ್ರೀ.ಜಿ.ಮೋಹನ್, ಎಂಬುವರು ತಿಳಿಸಿರುವುದರಿಂದ ಸದರಿ ವಿಷಯದ ಸತ್ಯತೆಯನ್ನು ಒಪ್ಪಿ ಅದರಂತೆ ಮಹಜರ್ ನಡೆಸಿ ಸ್ಥಳದಲ್ಲಿ ಮರದ ಬುಡ ಬೇರು ಇರುವುದರಿಂದ ಸದರಿ ಪ್ರಕರಣವು ವಲಯ ಅರಣ್ಯ ಅಧಿಕಾರಿಗಳು, ಬೆಂಗಳೂರು ವಲಯ ಇವರಿಗೆ ಹಸ್ತಾಂತರಿಸಲಾಯಿತು. ಅದರಂತೆ ವಲಯ ಅರಣ್ಯ ಅಧಿಕಾರಿಯವರು ಬುಡವನ್ನು ಬೇರು ಸಹಿತ ನಿಯಮಗಳಂತೆ ತೆಗೆದು ಶ್ರೀಗಂಧದ ಕೋಠಿ ಮೈಸೂರಿಗೆ ಕಳುಹಿಸಿರುತ್ತಾರೆ. ಮತ್ತು ಈ ಕಛೇರಿಯ ಸಿಬ್ಬಂದಿಯವರು ಸರ್ಕಾರದ ಪರ ವಶಪಡಿಸಿಕೊಂಡಿರುವ ಸದರಿ ಮರದಿಂದ ಬಂದ ಎರಡು ಶ್ರೀಗಂಧದ ತುಂಡುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 85 ರ ಪ್ರಕಾರ ಸದರಿ ಶ್ರೀಗಂಧದ ಮರವು ಸರ್ಕಾರಿ ಸ್ವತ್ತಾದ್ದರಿಂದ ಹಾಗೂ ಸದರಿ ಶ್ರೀಗಂಧದ ಮರದ ಮೇಲೆ ಕೊಳವೆ ಬಾವಿ ಕೊರೆಯಲು ಬಂದಿದ್ದ ಲಾರಿಯು ಚಾಲಕನಿಗೆ ಗೊತ್ತಿಲ್ಲದೆ ಮರಕ್ಕೆ ಜಖಂ ಮಾಡಿರುವುದು ನಿವೇಶನದ ಮಾಲೀಕರ ಅಜಾಗರುಕತೆ ಎಂದು ಪರಿಗಣಿಸಬಹುದಾಗಿದೆ. ಹಾಗೂ ಪ್ರಕರಣದ ವಿಚಾರಣಾಧಿಕಾರಿಯಾದ ವಲಯ ಅರಣ್ಯ ಅಧಿಕಾರಿಯವರು ವಿಚಾರಣೆ ನಡೆಸಿ ಬೆಂಗಳೂರು ವಲಯ ಇವರು ಮೈಸೂರಿಗೆ ಕಳುಹಿಸಿದ ಬುಡವನ್ನು ಮತ್ತು ಈ ಕಛೇರಿಯಲ್ಲಿ ದಾಸ್ತಾನಲ್ಲಿರುವ ಎರಡು ತುಂಡು ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ ಮೇರೆಗೆ ಪ್ರಕರಣದ ಹಿನ್ನೆಲೆ ಆಧಾರಿಸಿ ಈ ಕೆಳಗಿನಂತೆ ಆದೇಶ.

ಆದೇಶ

ಶ್ರೀ.ಎಂ.ಕೃಷ್ಣಪ್ಪ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71A ಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸುತ್ತಾ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಎರಡು ಶ್ರೀಗಂಧದ 5.65 Kg. ಒಟ್ಟು ತೂಕದ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಹಾಗೂ ಸದರಿ ನಿವೇಶನ ಮಾಲಿಕನ ಅಜಾಗರುಕತೆ ಹಾಗೂ ಮಗ್ದತೆಯನ್ನು ಮನಗೊಂಡು ರೂಪಾಯಿ ಒಂದು ಸಾವಿರ (ರೂ.1,000/-) ಗಳನ್ನು ದಂಡವಾಗಿ ವಸೂಲು ಮಾಡಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕಃ 21/2/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1179

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ,
ಬೆಂಗಳೂರು ರವರ ನ್ಯಾಯಾಲಯ
ಎಫ್.ಓ.ಸಿ. ಸಂಖ್ಯೆಃ 105/2001-02, ದಿನಾಂಕಃ 23/8/2001
ದಿನಾಂಕಃ 5th June 2004

ಉಪಸ್ಥಿತರು : ಎಂ.ಕೃಷ್ಣಪ್ಪ,
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿದಳ, ಬೆಂಗಳೂರು.

ಪಿರ್ಯಾದಿ : ವಲಯ ಅರಣ್ಯ ಅಧಿಕಾರಿಗಳು ಅರಣ್ಯ ಸಂಚಾರಿದಳ,
ಬೆಂಗಳೂರು.

ಪ್ರಕರಣ ಮುಖ್ಯಾಂಶಗಳು :

1. ದಿನಾಂಕಃ23/8/2001 ರಂದು ಪಿರ್ಯಾದಿದಾರರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯೊಂದಿಗೆ ಬೆಂಗಳೂರು ಮೈಸೂರು ರಸ್ತೆಯಲ್ಲಿ ಕೆಂಗೇರಿ ಬಳಿ ಹೋಗುತ್ತಿದ್ದಾಗ ಕ್ಯಾಂಟರ್ ವಾಹನ ನೊಂದಣಿ ಸಂಖ್ಯೆಃ KA-09-46 ನೇದರಲ್ಲಿ ಅಕ್ರಮವಾಗಿ ಶ್ರೀಗಂಧದ ಪುಡಿಯು ಸಾಗಾಣಿಕೆಯಾಗುತ್ತಿದ್ದುದನ್ನು ಪತ್ತೆ ಹಚ್ಚಿ ಮೊಕ್ಕದಮೆಯನ್ನು ನೋಂದಾಯಿಸಿಕೊಂಡು ಪ್ರಾಧಿಕಾರಕ್ಕೆ ವಾಹನ ಮತ್ತು ಅದರಲ್ಲಿಯ ಶ್ರೀಗಂಧದ ಪುಡಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದು ಇರುತ್ತದೆ.
2. ಪ್ರಾಧಿಕಾರಕ್ಕೆ ಈ ಮೇಲೆ ಹೇಳಿದ ಪ್ರಕರಣದ ಕಡತ ಹಾಗೂ ಮಾಲು ತಲುಪಿದ ನಂತರ ಅರ್ಜಿದಾರನಿಗೆ ಕಾರಣ ಕೇಳುವ ನೋಟೀಸನ್ನು ಅರಣ್ಯ ಕಾಯ್ದೆ ಕಲಂ 71B ನೇದರ ಕೆಳಗೆ ಹೊರಡಿಸಿದ್ದು ಇರುತ್ತದೆ.
3. ಅರ್ಜಿದಾರನ ನ್ಯಾಯವಾದಿಗಳು ಆತನ ಪರವಾಗಿ ಅರ್ಜಿಯೊಂದನ್ನು ಸಲ್ಲಿಸಿ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಬಿಡಬೇಕೆಂದು ವಿನಂತಿಸಿದ್ದು ಇರುತ್ತದೆ. ಅದಕ್ಕೆ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ತಕರಾರುಗಳನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ಅರ್ಜಿಯ ವಿಚಾರಣೆಯ ಹಂತದಲ್ಲಿ ಇರುವಾಗ ಪ್ರಸ್ತುತ ವಾಹನವು ರೂ.10,000/- ಗಳು ಬೆಲೆ ಬಾಳುವ ನಾಲ್ಕು ಹಸುಗಳನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗವಾಗಿತ್ತು ಅಂತ ಆರಕ್ಷಕ ಉಪ ನಿರೀಕ್ಷಕರು ಅಪರಾಧ ವಿಭಾಗ, ಹೆಚ್.ಡಿ.ಕೋಟೆ, ಪೊಲೀಸ್ ಠಾಣೆ ಇವರು ಪ್ರಾಧಿಕಾರಕ್ಕೆ ದಿನಾಂಕಃ14/12/2001 ರ ಪತ್ರದ ಪ್ರಕಾರ ತಿಳಿಸಿರುತ್ತಾರೆ.
4. ಅಮಾನತ್ತು ಪಡಿಸಿಕೊಂಡಿರುವ ಸಂಶಯಾಸ್ಪದ ಶ್ರೀಗಂಧದ ಪುಡಿಯು ನಿರ್ದಿಷ್ಟವಾಗಿ ಅಂತಹ ಶ್ರೀಗಂಧ ಪುಡಿಯು ಆಗಿದೆಯೋ ಹೇಗೆ ಎಂಬುದರ ಬಗ್ಗೆ ಅವರ ಅಭಿಪ್ರಾಯ ತಿಳಿಸಲು ಬೆಂಗಳೂರಿನ ಇಂಡಿಯನ್ ಇನ್ಸ್ಟ್ಯೂಟ್ ಆಫ್ ವುಡ್ ಸೈನ್ಸ್, ಇವರಿಗೆ ಪತ್ರ ಬರೆದು ಮಾದರಿ ಸಂಶಯಾಸ್ಪದ ಶ್ರೀಗಂಧದ ಪುಡಿಯನ್ನು ಕೂಡ ಅವರ ವಿಶ್ಲೇಷಣೆಗೆ ಒದಗಿಸಲಾಗಿತ್ತು.
5. ಮೇಲೆ ಹೇಳಿದ ಇಂಡಿಯನ್ ಇನ್ಸ್ಟ್ಯೂಟ್ ಆಫ್ ವುಡ್ ಸೈನ್ಸ್, ಬೆಂಗಳೂರು, ಇವರು ಪ್ರಾಧಿಕಾರಕ್ಕೆ ದಿನಾಂಕಃ14/1/2004 ರಂದು ಪತ್ರ ಒಂದನ್ನು ಬರೆದು ಅವರಿಗೆ ನಮ್ಮ ಇಲಾಖೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಪುಡಿಯು ಶ್ರೀಗಂಧದ ಪುಡಿಯು ಆಗಿರುವುದಿಲ್ಲವೆಂದು ಅವರ ಅಭಿಪ್ರಾಯ ತಿಳಿಸಿರುತ್ತಾರೆ.
6. ಈ ಮಧ್ಯೆ ಅರ್ಜಿದಾರನು ಹೆಚ್.ಡಿ.ಕೋಟೆ ಪೊಲೀಸರಿಗೆ ಅವರ ಮೊಕದ್ದಮೆ ಸಿಸಿ ನಂ.331/2002 ರಲ್ಲಿ ಬೇಕಾಗಿದ್ದ ಪ್ರಸ್ತುತ ವಾಹನದ ಪ್ರಕರಣ ಕೂಡ ದಿನಾಂಕಃ10/2/2004 ರಂದು ಮುಕ್ತಾಯವಾಗಿರುತ್ತದೆ ಅಂತ ಸದರಿ ಪೊಲೀಸರ ವರದಿ ನೀಡಿರುತ್ತಾನೆ. ಅದರಂತೆ ಆತ ಪ್ರಾಧಿಕಾರಕ್ಕೆ ದಿನಾಂಕಃ29/5/2004 ರಂದು ಅರ್ಜಿಯೊಂದನ್ನು ಕೂಡ ಸಲ್ಲಿಸಿ ತಾನು ಪ್ರಕರಣವನ್ನು ಇಲಾಖಾ ಮುಖಾಂತರ ದಂಡ ಭರಿಸಿ ಮುಕ್ತಾಯಗೊಳಿಸಲು ಸಿದ್ದನಿದ್ದೇನೆ ಅಂತ ಅರ್ಜಿ ಸಹ ಸಲ್ಲಿಸಿರುತ್ತಾನೆ. ಈ ಬಗ್ಗೆ ಸಹಾಯಕ ಅಭಿಯೋಗ ಉಪ ನಿರ್ದೇಶಕರು ಕಡತ ಪರಿಶೀಲಿಸಿ ತಮ್ಮ ಅಭಿಪ್ರಾಯ ಸಹ ವ್ಯಕ್ತ ಪಡಿಸಿದ್ದು, ಮೊಕದ್ದಮೆಯನ್ನು ಇಲಾಖಾ ಮುಖಾಂತರ ಅರ್ಜಿದಾರನಿಗೆ ದಂಡ ವಿಧಿಸಿ ಮುಕ್ತಾಯಗೊಳಿಸಬಹುದಾಗಿದೆ ಅಂತ ತಮ್ಮ ಸಲಹೆ ನೀಡಿರುತ್ತಾರೆ.
7. ಕಡತವನ್ನು, ಕಾನೂನು ಸಲಹೆಗಾರರ ಅಭಿಪ್ರಾಯ ಹಾಗೂ ಅರ್ಜಿದಾರನ ಅರ್ಜಿಯನ್ನು ಪರಿಶೀಲಿಸಲಾಗಿ ಹಾಗೂ ಪ್ರಾಧಿಕಾರಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 79 ರ ಕೆಳಗೆ ಇರುವ ಅಧಿಕಾರವನ್ನು ಕೂಡ ಪರಿಶೀಲಿಸಲಾಗಿ ಪ್ರಸ್ತುತ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಪುಡಿಯು ಶ್ರೀಗಂಧದ ಪುಡಿಯು ಆಗಿರದೆ ಅರಣ್ಯ ಉತ್ಪನ್ನವಾಗಿರುವುದರಿಂದ

ಪ್ರಾಧಿಕಾರಕ್ಕೆ ಈ ಬಗ್ಗೆ ಇಲಾಖಾ ಮುಖಾಂತರ ಪ್ರಕರಣವನ್ನು ಅರ್ಜಿದಾರನಿಗೆ ದಂಡ ವಿಧಿಸಿ ಇತ್ಯರ್ಥ ಪಡಿಸಲಿಕ್ಕೆ ಸಂಪೂರ್ಣವಾಗಿ ಕಾನೂನು ಪ್ರಕಾರ ಬರುವುದರಿಂದ ಅರ್ಜಿದಾರನ ಅರ್ಜಿಯನ್ನು ಪುರಸ್ಕರಿಸಿ ಮತ್ತು ಸರ್ಕಾರಕ್ಕೆ ದಂಡದ ಮುಖಾಂತರ ಆದಾಯ ಕೂಡ ಪ್ರಕರಣದಲ್ಲಿ ಬರುತ್ತಿರುವುದರಿಂದ, ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರನಿಗೆ ಘಟನೆಯ ದಿನಾಂಕದಂದು ಮರದ ಪುಡಿಯನ್ನು ತನ್ನ ಈ ಮೇಲೆ ಹೇಳಿದ ವಾಹನದಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದರಿಂದ ಆತನಿಗೆ ದಂಡ ವಿಧಿಸಿ ಈ ಕೆಳಗಿನಂತೆ ಆದೇಶವನ್ನು ಮಾಡ ಬಯಸುತ್ತೇನೆ.

ಆದೇಶ

ನನಗೆ ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 79 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಪ್ರಸ್ತುತ ಮೊಕದ್ದಮೆಯಲ್ಲಿ ಅರ್ಜಿದಾರನ ವಾಹನ ಅಕ್ರಮವಾಗಿ ಮರದ ಪುಡಿಯನ್ನು ಸಾಗಾಣಿಕೆ ಮಾಡಿದ ಕಾರಣಕ್ಕೆ ರೂ.10,000/- (ರೂ. ಹತ್ತು ಸಾವಿರ ಮಾತ್ರ) ಗಳ ದಂಡ ವಿಧಿಸಿ, ಆತನ ವಾಹನ ಸಂಖ್ಯೆ:KA-09-46 ಹಾಗೂ ಅದರಲ್ಲಿ ಅಮಾನತ್ತು ಪಡಿಸಿಕೊಂಡಿರುವ 106 ಗೋಣಿ ಚೀಲಗಳಲ್ಲಿ ಇರುವ ಮರದ ಪುಡಿಯನ್ನು ಆತನ ಸುಪರ್ದಿಗೆ ಬಿಟ್ಟು ಕೊಡಲು ಆದೇಶಿಸಿದ್ದೇನೆ.

ಈ ಅದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 5/6/2004. ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಎಂ.ಕೃಷ್ಣಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿದಳ ಮತ್ತು ಜಾಗೃತ, ಬೆಂಗಳೂರು.

PR-1180

**DEPARTMENT OF CO-OPERATION**
**OFFICE OF THE ASSISTANT REGISTRAR OF CO-OPERATIVE SOCIETIES, I CIRCLE, CHAMARAJPET, BANGALORE-560 018**
**ARB/44/CON/1/2004-05 Dated: 21st April 2004**

**Sub :** Confirmation for sale in CEP No. 200/2003-04, Decree No. DRB/DIS/2755/99-00, dated: 10.08.2001, relates to the Janatha Seva Co-operative Bank Ltd., No. 14, Rajatha Bhavan, Ist Main Road, RPC Layout, Vijayanagar, Bangalore-560 040.

**Ref :** Letter No. 943 dated: 25.03.04 from Sale Officer, attached Janatha Seva Co-operative Bank Ltd., No. 14, Rajatha Bhavan, Ist Main Road, RPC Layout, Vijayanagar, Bangalore-560 040.

**Preamble:**

The Sale Officer, Janatha Seva Co-operative Bank Ltd., No. 14, Rajatha Bhavan, Ist Main Road, RPC Layout, Vijayanagar, Bangalore-560 040 has conducted the sale in CEP No. 200/2003-04 and at Gopalapura, Bangalore South Taluk and sold the under mentioned Immovable Property of Sri. Altaf Pasha due to the loan outstanding to the Janatha Seva Co-operative Bank Ltd., RPC Layout, Vijayanagar, Bangalore-560 040 and the said Immovable Property knocked down in public auction fixed on 05.02.2004 at Gopalapura, Bangalore in favour of Smt. R. Shanthi W/o Sri. Ramalingam residing at No. 1/2, 3rd Cross, Gopalapura, Behind minerva mill, magadi road Bangalore-560023. for Rs. 3,72,000/- (Rupees Three lakh seventy two thousand Only) as there are no other highest bidder as per the report of the sale officer working in Janatha Seva Co-operative Bank Ltd., Hence the following orders.

**PROPERTY SCHEDULE**

| Town | Site No. | Extent | Assessment | Kind of Land |
|---|---|---|---|---|
| Gopalapura, behind minerva mill, magadi road, Bangalore-560 023. | No. 13/3, 3rd Cross, Gopalapura, behind minerva mill, magadi road Bangalore 560023. | Ground Floor, East to West-12 Ft. North to South-50.00 ft. | 3,60,000-00 | Industrial shed |

**ORDERS**

The said Immovable Property of Sri. Altaf Pasha, No. 13/3, 3rd Cross, behind minerva mill, Gopalapura, magadi road, Bangalore-560023. which is mortgaged to the Janatha Seva Co-operative Bank Ltd., Vijayanagar, Bangalore-560 040, for having taken loan from the said Bank and default in payment, the property have been sold at Public Auction on 05.02.2004 in CEP: 200/2003- and knocked down in favour of Smt. R. Shanthi W/o Sri. Ramalingam, residing at No. 1/2 3rd Cross, Gopalapura, behind minerva mill, magadi road, Bangalore-560023, for Rs.3,72,000/- (Rupees Three lakh seventy two thousand Only).

Hence the Sale conducted on 05.02.2004 is confirmed in favour of Smt. R. Shanthi W/o Sri. Ramalingam, 1/2, 3rd cross, Gopalapura, behind minerva mill, magadi road, Bangalore-560 023, who is the highest bidder as per rule 38 of KCS Rules-1960.

Given under my hand seal on this day of 21st April 2004

**H. C. JOSHI**
Assistant Registrar of Co-operative Societies, I Circle, Chamarajpet, Bangalore-560 018.

PR-1167

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**

**ಭದ್ರಾವತಿ, ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ:ಸಿಓಎನ್:ಸಿಆರ್:24/01-02 ದಿನಾಂಕ: 28ನೇ ಜುಲೈ 2004**

**ಉಪಸ್ಥಿತರು :** ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

| **ಫಿರ್ಯಾದಿದಾರರು** | **ವಿರುದ್ಧ** | **ಅರ್ಜಿದಾರರು** |
|---|---|---|
| 1. ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ತರೀಕೆರೆ ಪೋಲಿಸ್ ಠಾಣೆ, ತರೀಕೆರೆ. | | 1. ಅಜೀಮ್ ಭಾಷ ಬಿನ್ ಅಕ್ಬರ್ ಸಾಬ್ ಮುಖ್ಯ ರಸ್ತೆ, ಅಶೋಕ ನಗರ, ಶಿವಮೊಗ್ಗ<br>2. ಮಂಜುನಾಥ್ ಬಿನ್ ಬುಡೇಪ್ಪ ಪಿ.ಡಬ್ಲ್ಯೂಡಿ ಕ್ವಾರ್ಟ್ರಸ್, ನಂ.26 ಬಾಲರಾಜ್ ಅರಸ್ ರಸ್ತೆ, ಶಿವಮೊಗ್ಗ. |

**ಕಲಂ 41 ಡಿ (1) R/W 102 CRPC R/W 379 IPC R/W 86, 87 ಕೆ ಎಫ್ ಆಕ್ಟ್ ರಂತೆ ಅಪರಾಧ**

**ಪ್ರಸ್ತಾವನೆ:**

ದಿನಾಂಕ: 17.10.2001 ರಂದು ರಾತ್ರಿ ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ಅಪರಾಧ ವಿಭಾಗ, ತರೀಕೆರೆ ಪೋಲಿಸ್ ಠಾಣೆ ಹಾಗೂ ಸಿಬ್ಬಂದಿಯವರು ಕರ್ತವ್ಯ ನಿರ್ವಹಿಸುತ್ತಿರುವಾಗ ದಿನಾಂಕ: 18.10.2001ರ ಬೆಳಗಿನ ಜಾವ 5.30 ಗಂಟೆಗೆ ತರೀಕೆರೆ ಟೌನ್ ಬಿ. ಹೆಚ್. ರಸ್ತೆ, ದಕ್ಷಿಣ ಬದಿ ಇರುವ ಈದ್ಗಾ ಮೈದಾನದಲ್ಲಿರುವ ದೀಪು, ತರೀಕೆರೆ ವಾಸಿ ಇವರ ಕುಮಾರ ಆಟೋ ಗ್ಯಾರೇಜ್ ಸಮೀಪ ಒಂದು ಅಂಬಾಸಿಡರ್ ಕಾರು ಹಾಗೂ ಬಿಳಿಯ ಬಣ್ಣದ ಮಾರುತಿ ಓಮಿನಿ ವ್ಯಾನು ನಿಂತಿದ್ದು, ಅನುಮಾನ ಬಂದು ಯಾವುದೆಂದು ನೋಡಲಾಗಿ ವಾಹನಗಳ ಕಡೆ ಹೋಗುತ್ತಿದ್ದಂತೆಯೇ, ವಾಹನಗಳನ್ನು ನಿಲ್ಲಿಸಿದ ಸ್ಥಳದಿಂದ ಸುಮಾರು 150 ಅಡಿ ದೂರದಲ್ಲಿ ನಾಲ್ಕು ಜನ ಆಸಾಮಿಗಳು ಸ್ಯಾಂಡಲ್ ಕೋಠಿ ಕಾಂಪೌಂಡು ಪಕ್ಕದಲ್ಲಿ ನಿಂತಿದ್ದರು. ಸಮವಸ್ತ್ರದಲ್ಲಿದ್ದ ಪೋಲಿಸ್ ಸಿಬ್ಬಂದಿಗಳನ್ನು ಕಂಡು ಓಡಿ ಹೋಗಿದ್ದು, ಅವರುಗಳನ್ನು ಬೆನ್ನಟ್ಟಿದರೂ ಸಹ ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ವಾಹನಗಳ ಹತ್ತಿರ ಬಂದು ಪರಿಶೀಲಿಸಲಾಗಿ ಅಂಬಾಸಿಡರ್ ಕಾರಿನಲ್ಲಿ ಶ್ರೀಗಂಧ ತುಂಬಿದ ಮೂರು ಚೀಲಗಳಿದ್ದವು. ಮಾರುತಿ ಓಮಿನಿ ವ್ಯಾನಿನಲ್ಲಿ ಶ್ರೀಗಂಧ ತುಂಬಿದ ಎರಡು ಗೋಣಿಚೀಲಗಳಿದ್ದವು ಸುತ್ತಮುತ್ತ ಹುಡುಕಲಾಗಿ ಶ್ರೀಗಂಧದ ದಾಸ್ತಾನು ಕೋಠಿ ಕಾಂಪೌಂಡು ಪಕ್ಕದಲ್ಲಿ ಶ್ರೀಗಂಧದ ತುಂಡುಗಳನ್ನು ತುಂಬಿದ ಎರಡು ಗೋಣಿಚೀಲಗಳಿದ್ದವು. ಹಾಗೂ ಐದು ಅಡಿ ಉದ್ದದ ಒಂದು ಬಿದಿರಿನ ಏಣಿ ಮತ್ತು ಆರು ಅಡಿ ಉದ್ದದ ಒಂದು ಬಿದಿರಿನ ಏಣಿ ಕಾಂಪೌಂಡು ಗೋಡೆಗೆ ಒರಗಿಸಿ ನಿಲ್ಲಿಸಿದ್ದು ಅಲ್ಲದೇ ನೆಲದ ಮೇಲೆ ಸುಮಾರು ಹದಿನೈದು ಅಡಿ ಉದ್ದದ ಒಂದು ತೆಂಗಿನ ಹಗ್ಗ ಮತ್ತು ಹಗ್ಗಕ್ಕೆ ಒಂದು ಕಬ್ಬಿಣದ ಕೊಕ್ಕೆಕಟ್ಟಿರುವುದು ಕಂಡುಬಂತು. ಆರೋಪಿತರು ಶ್ರೀಗಂಧದ ಕೋಠಿಯಿಂದ ಕಳವು ಮಾಡಿಕೊಂಡು ಕಾಂಪೌಂಡು ಗೋಡೆಯಿಂದ ಹೊರಗಡೆ ಸಾಗಿಸಿ ಕಾರು ಮತ್ತು ಮಾರುತಿ ವ್ಯಾನಿನಲ್ಲಿ ತುಂಬುತ್ತಿರುವಾಗ ಪೋಲಿಸ್ ಸಿಬ್ಬಂದಿಯವರನ್ನು ಕಂಡು ಓಡಿ ಹೋಗಿದ್ದರಿಂದ, ಶ್ರೀಗಂಧದ ತುಂಡುಗಳು ಹಾಗೂ ಕೃತ್ಯಕ್ಕೆ ಉಪಯೋಗಿಸಿದ ವಾಹನವನ್ನು ಅಮಾನತ್ತುಪಡಿಸುವ ಬಗ್ಗೆ ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ಶ್ರೀಗಂಧವನ್ನು ತೂಕ ಮಾಡಿ ನೋಡಲಾಗಿ ಏಳು ಚೀಲಗಳಲ್ಲಿದ್ದ ಒಟ್ಟು ಹನ್ನೆರಡು ಶ್ರೀಗಂಧದ ತುಂಡು ತೂಕ 128 ಕೆ.ಜಿ. ಇದ್ದು, ಅಂದಾಜು ಬೆಲೆ ರೂ. 39,000/- ಆಗುತ್ತದೆ ಎಂದು ಪಂಚರು ಅಭಿಪ್ರಾಯಪಟ್ಟಿರುತ್ತಾರೆ.

ಅಂಬಾಸಿಡರ್ ಕಾರು ಪರಿಶೀಲಿಸಲಾಗಿ ಬಿಳಿಯ ಬಣ್ಣ ಆಗಿದ್ದು, ಡೀಸಲ್ ಇಂಜಿನ್, ರಿಜಿಸ್ಟರ್ ನಂ. ಎಂವೈಜಿ 5707 ಆಗಿರುತ್ತದೆ. ಮಾರುತಿ ಓಮಿನಿ ವ್ಯಾನ್‌ನನ್ನು ಪರಿಶೀಲಿಸಲಾಗಿ ಬಿಳಿಯ ಬಣ್ಣದಾಗಿದ್ದು ರಿಜಿಸ್ಟ್ರೇಷನ್ ನಂ: ಕೆಎ-01-ಎಂ-2170 ಆಗಿರುತ್ತದೆ. ಮೇಲ್ಕಂಡ ಶ್ರೀಗಂಧದ ಹಾಗೂ ಅಂಬಾಸಿಡರ್ ಕಾರು, ಮಾರುತಿ ಓಮಿನಿ ವ್ಯಾನು ಮತ್ತು ಕೃತ್ಯಕ್ಕೆ ಉಪಯೋಗಿಸಿದ ಏಣಿಗಳು ಹಾಗೂ ಹಗ್ಗವನ್ನು ಮುಂದಿನ ಕ್ರಮದ ಬಗ್ಗೆ ಪಂಚನಾಮೆ ಮುಖೇನ 9.00 ಗಂಟೆಗೆ ಅಮಾನತ್ತುಪಡಿಸಿ. 9.30 ಕ್ಕೆ ಠಾಣೆಗೆ ಮಾಲು ಸಮೇತ ಬಂದು ಠಾಣೆ ದೂರು ನಂ. 220/01 ಕಲಂ 41 ಡಿ (1) ಆರ್/ಡಬ್ಲ್ಯೂ 102 ಸಿಆರ್‌ಪಿಸಿ ಆರ್/ಡಬ್ಲ್ಯೂ 379/ಐಪಿಸಿ ಆರ್/ಡಬ್ಲ್ಯೂ 86-87 ಅರಣ್ಯ ಕಾಯಿದೆಯಂತೆ ಸರ್ಕಾರದ ಪರವಾಗಿ ವಶಪಡಿಸಿಕೊಂಡಿರುತ್ತಾರೆ. ಹಾಗೂ ಪ್ರಕರಣಕ್ಕೆ ಸಂಬಂಧಿಸಿದಂತೆ ವಾಹನಗಳನ್ನು ಮತ್ತು ಶ್ರೀಗಂಧವನ್ನು ದಾಖಲಾತಿಗಳ ಮೂಲಕ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ಅರಣ್ಯ ಇಲಾಖೆಯ ವಶಕ್ಕೆ ಪಡೆಯಲು ಕೋರಿರುತ್ತಾರೆ. ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ತರೀಕೆರೆ ರವರ ಕೋರಿಕೆಯಂತೆ ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 71 (ಎ) ಪ್ರಕಾರ ಕ್ರಮ ಜರುಗಿಸಿ ಮೇಲ್ಕಂಡ ವಾಹನವನ್ನು ಹಾಗೂ ಶ್ರೀಗಂಧವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿಗಳು, ತರೀಕೆರೆ ವಲಯ, ತರೀಕೆರೆರವರ ಸುಪರ್ದಿಗೆ ನೀಡಲಾಗಿದೆ.

ದಿನಾಂಕ: 18.1.2002 ರಂದು ಅಂಬಾಸಿಡರ್ ಕಾರು ಎಂವೈಜಿ 5707 ರ ಮಾಲೀಕರೆಂದು ಶ್ರೀ ಅಜೀಮ್‌ಭಾಷ ಬಿನ್ ಬಿ. ಅಕ್ಬರ್ ಸಾಬ್, ಅಶೋಕನಗರ, ಮುಖ್ಯ ರಸ್ತೆ, ಶಿವಮೊಗ್ಗ ಹಾಗೂ ಮಾರುತಿ ಓಮಿನಿ ವ್ಯಾನಿನ ಮಾಲೀಕರೆಂದು, ಶ್ರೀ ಮಂಜುನಾಥ್ ಬಿನ್ ಬುಡೇಪ್ಪ, ಪಿಡಬ್ಲ್ಯೂಡಿ ಕ್ವಾರ್ಟ್ರಸ್, ನಂ. 28 ಬಾಲರಾಜ್ ಅರಸ್ ರಸ್ತೆ, ಶಿವಮೊಗ್ಗ ಇವರುಗಳು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ, ಸದರಿ ಅರಣ್ಯ ಅಪರಾಧ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ, ರಸ್ತೆಯ ಪಕ್ಕದಲ್ಲಿ ವಾಹನವನ್ನು ನಿಲ್ಲಿಸಿ ಬಾಹ್ಯ ಕಾರ್ಯಕ್ಕೆ ಹೋದಾಗ ಪೋಲಿಸ್‌ನವರು ವಾಹನ ಚಾಲಕನಿಗೆ ತಿಳಿಸದೇ ವಾಹನವನ್ನು ತೆಗೆದುಕೊಂಡು ಹೋಗಿ ಸುಳ್ಳು ಕೇಸನ್ನು ಹಾಕಿರುತ್ತಾರೆ. ಸದರಿ ವಾಹನದಿಂದಲೇ ನಮ್ಮ ಜೀವನ ಸಾಗುತ್ತಿದ್ದು, ವಾಹನವನ್ನು ಕಛೇರಿಯ ಆವರಣದಲ್ಲಿಟ್ಟಿರುವುದರಿಂದ ವಾಹನವು ಹಾಳಾಗಿ ಉಪಯೋಗಕ್ಕೆ ಬಾರದೇ ಹಾಳಾಗುತ್ತದೆ. ಪ್ರಕರಣದ ವಿಚಾರಣೆಯನ್ನು ಬಾಕಿಯಿರಿಸಿಕೊಂಡು ವಾಹನಗಳನ್ನು ತಾತ್ಕಾಲಿಕವಾಗಿ ಬಿಡುಗಡೆಗೆ ಕೋರಿರುತ್ತಾರೆ.

ಮೇಲ್ಕಂಡ ಅರ್ಜಿದಾರರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ದಿನಾಂಕ: 22.1.2002 ರಂದು ನೀಡಿದ್ದು, ಅರ್ಜಿದಾರರು 8.2.2002 ರಂದು ಸಮಜಾಯಿಸಿ ನೀಡಿ, ಪೋಲೀಸ್ ಸಿಬ್ಬಂದಿ ವರ್ಗದವರು ನಾವು ಯಾವ ಅಪರಾಧ ಮಾಡದೇ ಇದ್ದರೂ ಸಹ ಸುಮ್ಮನೇ ಪ್ರಕರಣ ದಾಖಲು ಮಾಡಿರುತ್ತಾರೆ. ದಯಮಾಡಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ. ನ್ಯಾಯಾಲಯ, ಭದ್ರಾವತಿ ಇವರು 16.7.2003 ರಂದು ಆಕ್ಷೇಪಣಾ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಂತೆ ಅರ್ಜಿದಾರರು ಅವರ ಅರ್ಜಿಯಲ್ಲಿ ತಿಳಿಸಿರುವಂತೆ ಅಂಬಾಸಿಡರ್ ಕಾರು ಹಾಗೂ ಮಾರುತಿ ಓಮಿನಿ ವ್ಯಾನ್‌ನಲ್ಲಿ ವಿನಾಕಾರಣ ಅಮಾನತ್ತುಪಡಿಸಿಕೊಂಡಿರುವುದಿಲ್ಲ. ತನಿಖೆಯಲ್ಲಿ ಎರಡು ವಾಹನಗಳಲ್ಲಿ ಶ್ರೀಗಂಧದ ತುಂಡುಗಳು ಇರುವುದು ಕಂಡು ಬಂದಿದ್ದು, ಅವುಗಳನ್ನು ಮಹಜರ್ ಮುಖೇನಾ ಅಮಾನತ್ತುಪಡಿಸಿಕೊಂಡಿದ್ದು, ಮೇಲುನೋಟಕ್ಕೆ ಕಂಡು ಬಂದಿರುತ್ತದೆ. ವಾಹನಗಳು ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿರುವುದು ಸಾಬೀತಾಗಿರುತ್ತದೆ. ಈ ಹಂತದಲ್ಲಿ ಅರ್ಜಿದಾರರುಗಳಿಗೆ ಸಂಬಂಧಿಸಿದ ವಾಹನಗಳನ್ನು ಬಿಡುಗಡೆಗೊಳಿಸುವುದು ಸಮಂಜಸವಾಗಿರುವುದಿಲ್ಲ. ಸದರಿ ಪ್ರಕರಣದಲ್ಲಿ ವಿಚಾರಣೆ ಇನ್ನೂ ಪ್ರಾರಂಭವಾಗಿರುವುದಿಲ್ಲ ಮತ್ತು ಅಮಾನತ್ತುಪಡಿಸಿಕೊಂಡ ವಾಹನಗಳು ಸಾಕ್ಷಿದಾರರುಗಳಿಂದ ವಿಚಾರಣೆ ಕಾಲದಲ್ಲಿ ಗುರುತಿಸಲ್ಪಡಬೇಕಾಗುತ್ತದೆ. ವಾಹನಗಳನ್ನು ಬಿಟ್ಟು ಕೊಟ್ಟಿದ್ದೆ ಆದಲ್ಲಿ ಪ್ರಕರಣದ ತನಿಖೆ ಕುಂಠಿತವಾಗುತ್ತದೆ. ಮತ್ತು ಅರ್ಜಿದಾರರು ಸದರಿ ವಾಹನಗಳನ್ನು ವಿಲೇವಾರಿ ಮಾಡುವ ಇಲ್ಲವೇ ದುರುಪಯೋಗಪಡಿಸಿಕೊಳ್ಳುವ ಸಾಧ್ಯತೆ ಹೆಚ್ಚಾಗಿರುತ್ತದೆ. ಆದ್ದರಿಂದ ಅರ್ಜಿದಾರರು ಸಲ್ಲಿಸಿದ ವಾಹನ ಬಿಡುಗಡೆಗೆ ಕೋರಿರುವ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಬೇಕಾಗಿ ಸರ್ಕಾರ ಅಭಿಯೋಜನೆ ವತಿಯಿಂದ ಕೋರಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಫಿರ್ಯಾದಿದಾರರ ದಾಖಲಾತಿಗಳು, ಅರ್ಜಿದಾರರ ಅರ್ಜಿಗಳು ಹಾಗೂ ಸಹಾಯಕ ಸರ್ಕಾರಿ ಅಭಿಯೋಜಕರು, ಭದ್ರಾವತಿ ಇವರು ಸಲ್ಲಿಸಿದ ಆಕ್ಷೇಪಣೆಯನ್ನು ಪರಿಶೀಲಿಸಿದಾಗ ದಿನಾಂಕ: 18.10.01 ರಂದು ಅಂಬಾಸಿಡರ್ ಕಾರು ಎಂವೈಜಿ 5707 ಹಾಗೂ ಮಾರುತಿ ಓಮಿನಿ ವ್ಯಾನು ನಂ. ಕೆಎ-01-ಎಂ-2170 ರಲ್ಲಿ ಅಕ್ರಮ ಶ್ರೀಗಂಧದ ತುಂಡುಗಳ ಸಾಗಾಣಿಕೆಯು ಮೇಲುನೋಟಕ್ಕೆ ಕಂಡುಬಂದಿರುವುದರಿಂದ ಈ ಪ್ರಕರಣದ ಬಗ್ಗೆ ಸಂಪೂರ್ಣ ವಿಚಾರಣೆ ಅಗತ್ಯವೆಂದು ಪರಿಗಣಿಸಿ ಅರಣ್ಯ ಪ್ರಕರಣದಲ್ಲಿ ವಶಪಡಿಸಿಕೊಂಡ ಮೇಲ್ಕಂಡ ವಾಹನಗಳನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಕೇಳಿರುವ ಮಧ್ಯಂತರ ಅರ್ಜಿಯನ್ನು ದಿನಾಂಕ: 16.7.2003 ರಂದು ತಿರಸ್ಕರಿಸಲಾಗಿರುತ್ತದೆ. ಅರ್ಜಿದಾರರು/ ವಾಹನದ ಮಾಲೀಕರು ಈ ನ್ಯಾಯಾಲಯದಲ್ಲಿ ಹೊರಡಿಸಿದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿರುವುದಿಲ್ಲ.

ಮೇಲ್ಕಂಡ ಪ್ರಕರಣದ ಬಗ್ಗೆ ಈ ನ್ಯಾಯಾಲಯದಲ್ಲಿ 12.11.03, 7.1.2004, 3.3.04, 28.04.04 ಹಾಗೂ 9.6.04 ರಂದು ಅಂತಿಮ ಆದೇಶದ ಬಗ್ಗೆ ವಿಚಾರಣೆ ನಡೆಸಲು ಪಿರ್ಯಾದಿದಾರರಿಗೆ ಹಾಗೂ ವಾಹನದ ಮಾಲೀಕರಿಗೆ ನ್ಯಾಯಾಲಯಕ್ಕೆ ಹಾಜರಾಗಲು ನೋಟೀಸ್ ನೀಡಿರುತ್ತದೆ. ಪಿರ್ಯಾದಿದಾರರಾದ ಶ್ರೀ ಬಿ. ಎಂ. ಖಾಸಿಂ, ಸಬ್‌ಇನ್ಸ್‌ಪೆಕ್ಟರ್, ಲಿಂಗದಹಳ್ಳಿ ಇವರು ನ್ಯಾಯಾಲಯಕ್ಕೆ ಅಭಿಯೋಜನೆವತಿಯಿಂದ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರುಗಳು ಮತ್ತು ಅವರ ಪರ ವಕೀಲರು ಸಹ ನ್ಯಾಯಾಲಯಕ್ಕೆ ಹಾಜರಾಗದೇ ಗೈರುಹಾಜರಾಗಿರುತ್ತಾರೆ. ಮತ್ತು ಪ್ರಕರಣದ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಸಹ ಹಾಜರುಪಡಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನಗಳ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ:1**

ವಾಹನ ಅಂಬಾಸಿಡರ್ ಕಾರು ಎಂವೈಜಿ 5707 ಹಾಗೂ ಮಾರುತಿ ಓಮಿನಿ ವ್ಯಾನು ನಂ. ಕೆಎ-01-ಎಂ-2170ನ್ನು ದಿನಾಂಕ: 18.1.2002 ರಂದು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ.

**ಅಂಶ:2**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾಧವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ವಾಹನ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂದು ಡಿಫೆನ್ಸ್‌ರವರು ರುಜುವಾತುಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತುಪಡಿಸಿರುತ್ತಾರೆಯೇ?

**ಅಂಶ:3**

ಆದೇಶವೇನು?

**ಕಾರಣಗಳು**

**ಅಂಶ:1**

ದಿನಾಂಕ: 17.10.2001 ರಂದು ರಾತ್ರಿ ಪೋಲಿಸ್ ಸಬ್ ಇನ್ಸ್‌ಪೆಕ್ಟರ್, ಅಪರಾಧ ವಿಭಾಗ, ತರೀಕೆರೆ ಪೋಲಿಸ್ ಠಾಣೆ ಹಾಗೂ ಸಿಬ್ಬಂದಿಯವರು ದಿನಾಂಕ: 18.10.2001 ರ ಬೆಳಗಿನ ಜಾವ 5.30 ಗಂಟೆಗೆ ತರೀಕೆರೆ ಟೌನ್ ಬಿ. ಹೆಚ್. ರಸ್ತೆ ದಕ್ಷಿಣ ಬದಿ ಇರುವ ಈದ್ಗಾ ಮೈದಾನದಲ್ಲಿರುವ ದೀಪು, ತರೀಕೆರೆ ವಾಸಿ ಇವರ ಕುಮಾರ್ ಆಟೋ ಗ್ಯಾರೇಜ್ ಸಮೀಪ ಒಂದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಎಂವೈಜಿ 5707 ಹಾಗೂ ಒಂದು ಬಿಳಿಬಣ್ಣದ ಮಾರುತಿ ಓಮಿನಿ ವ್ಯಾನು ನಂ. ಕೆಎ-01-2170 ರಲ್ಲಿ ಅಕ್ರಮ ಶ್ರೀಗಂಧದ ತುಂಡುಗಳು

ಸಾಗಾಣಿಕೆ ಸಂಬಂಧ ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಠಾಣೆ ದೂರು ನಂ. 220/01 ಕಲಂ 41 (ಡಿ) (1)ಡಿ ಆರ್‌ಡಬ್ಲ್ಯೂ-102-ಸಿಆರ್ ಪಿಸಿಆರ್/ಡಬ್ಲ್ಯೂ 379/ ಜೆಪಿ ಸಿಆರ್/ಡಬ್ಲ್ಯೂ-86-87 ಅರಣ್ಯ ಕಾಯ್ದೆಯಂತೆ ಕ್ರಮ ಜರುಗಿಸಿರುತ್ತಾರೆ. ಪ್ರಕರಣಕ್ಕೆ ಸಂಬಂಧಿಸಿದ ವಾಹನಗಳು ಮತ್ತು ಶ್ರೀಗಂಧವನ್ನು ದಾಖಲಾತಿಗಳ ಸಮೇತ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ, ಅರಣ್ಯ ಇಲಾಖೆಯ ವಶಕ್ಕೆ ಪಡೆಯಲು ಕೋರಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸಿ ಪ್ರಕರಣಕ್ಕೆ ಸಂಬಂಧಿಸಿದ ವಾಹನಗಳು ಹಾಗೂ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ಸುಪರ್ದಿಗೆ ನೀಡಿರುತ್ತದೆ. ಈ ಪ್ರಕರಣದ ಬಗ್ಗೆ ದಿನಾಂಕ: 7.1.2004 ರಂದು ಅಭಿಯೋಜನಾ ವತಿಯಿಂದ ಸಾಕ್ಷಿದಾರರಿಗೆ ಶ್ರೀ ಬಿ.ಎಂ. ಖಾಸಿಂ ಲೇಟ್ ಮಹಮದ್ ಮೊಹಿದ್ದೀನ್, ಪಿ.ಎಸ್.ಐ. ಲಿಂಗದಹಳ್ಳಿ ಇವರು ಈ ನ್ಯಾಯಾಲಯದಲ್ಲಿ ಸಾಕ್ಷಿ ನುಡಿದಿರುತ್ತಾರೆ. ಇವರ ಹೇಳಿಕೆಯಂತೆ 2001ನೇ ಇಸವಿಯಲ್ಲಿ ತರೀಕೆರೆ ಪೋಲಿಸ್ ಠಾಣೆಯಲ್ಲಿ ಅಪರಾಧ ವಿಭಾಗದ ಪಿಎಸ್‌ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ಈ ಪ್ರಕರಣದಲ್ಲಿ ನಾನೇ ಫಿರ್ಯಾದಿದಾರರು. ದಿನಾಂಕ: 17.1.2001 ರಂದು ರಾತ್ರಿ ಹೆಚ್.ಸಿ. 22 ಅನಂತೇಗೌಡ, ಪಿ.ಸಿ. 363 ಬಸಪ್ಪ, ಪಿ.ಸಿ. 571 ರವಿ ಇವರೊಂದಿಗೆ ನಾಕಾಬಂದಿ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಗೆ ದಿನಾಂಕ: 18.10.2001 ರಂದು ಬೆಳಗಿನ ಜಾವ 5.30 ಗಂಟೆಗೆ ತರೀಕೆರೆ ಬಿ. ಹೆಚ್. ರಸ್ತೆಯಲ್ಲಿ ಗಸ್ತು ಮಾಡುತ್ತಾ ಈದ್ಗಾ ಮೈದಾನದ ಹತ್ತಿರ ಇರುವ ದೀಪೂ ಎನ್ನುವವರಿಗೆ ಸೇರಿದ ಆಟೋ ಗ್ಯಾರೇಜ್ ಮುಂಭಾಗದಲ್ಲಿ ಒಂದು ಬಿಳಿ ಅಂಬಾಸಿಡರ್ ಕಾರು ಮತ್ತು ಬಿಳಿಬಣ್ಣದ ಮಾರುತಿ ಓಮಿನಿ ವ್ಯಾನು ನಿಂತಿರುವುದನ್ನು ಕಂಡು ಸಂಶಯಗೊಂಡು ವಾಹನಗಳ ಬಳಿ ಹೋದಾಗ ವಾಹನದಿಂದ ಸುಮಾರು 150 ಅಡಿ ದೂರದಲ್ಲಿ ನಿಂತ ಆಸಾಮಿಗಳು ಸಮವಸ್ತ್ರವನ್ನು ಕಂಡು ಓಡಿಹೋದರು. ಆಗ ಸಿಬ್ಬಂದಿ ಹಿಡಿಯಲು ಪ್ರಯತ್ನಪಟ್ಟಾಗ ಅವರು ತಪ್ಪಿಸಿಕೊಂಡು ಓಡಿಹೋದರು. ಮರಳಿ ವಾಹನದ ಬಳಿ ಬಂದು ನೋಡಲಾಗಿ ಮಾರುತಿ ಓಮಿನಿ ವ್ಯಾನಿನ ಒಳಭಾಗದಲ್ಲಿ 2 ಗೋಣಿಚೀಲ ಇದ್ದು, ಗೋಣಿಚೀಲವನ್ನು ಬಿಚ್ಚಿ ಪರಿಶೀಲಿಸಲಾಗಿ, ಅವುಗಳಲ್ಲಿ ಕಟ್ ಮಾಡಿದ ಶ್ರೀಗಂಧದ ತುಂಡುಗಳು ಇರುವುದು ಕಂಡುಬಂದಿತು. ನಂತರ ಸ್ಥಳದ ಸುತ್ತಮುತ್ತಲೂ ಹುಡುಕಲಾಗಿ ತರೀಕೆರೆ ಪಟ್ಟಣದಲ್ಲಿರುವ ಸ್ಯಾಂಡಲ್ ಕೋಠಿ ಪಕ್ಕದಲ್ಲಿ 2 ಸಣ್ಣ ಏಣಿಗಳು ಗೋಡೆಗೆ ನಿಲ್ಲಿಸಿರುವುದನ್ನು ಕಂಡು ಅಲ್ಲೂ ಸ್ಥಳದಲ್ಲಿ 2 ಚೀಲಗಳು ನೆಲದ ಮೇಲೆ ಬಿದ್ದಿದ್ದು, ಅದನ್ನು ಸಹ ಪರಿಶೀಲಿಸಲಾಗಿ ಅದರಲ್ಲೂ ಸಹ ಶ್ರೀಗಂಧದ ತುಂಡುಗಳು ಇರುವುದು ಕಂಡುಬಂದಿತು. ಅದರಂತೆ ಸ್ಥಳದಲ್ಲಿ ಇಟ್ಟಿದ್ದ ಏಣಿಗಳನ್ನು ಪರಿಶೀಲಿಸಲಾಗಿ 5 ಅಡಿಯ 2 ಏಣಿಗಳು ಗೋಡೆಗೆ ತಾಗಿಸಿ ಇಟ್ಟಿರುವುದು ಮತ್ತು ಸದರಿ ಏಣಿಯ ಪಕ್ಕದಲ್ಲಿ 15 ಅಡಿ ಉದ್ದದ ತೆಂಗಿನ ನಾರಿನ ಹಗ್ಗ ಸಹ ಬಿದ್ದಿದ್ದು, ತೆಂಗಿನ ನಾರಿನ ಹಗ್ಗದ ತುದಿಗೆ ಒಂದು ಕೊಕ್ಕೆ ಆಕಾರದ ಒಂದು ಕಬ್ಬಿಣದ ಹುಕ್ಕನ್ನು ಕಟ್ಟಿರುವುದು ಕಂಡು ಮೇಲ್ಕಂಡ ಪರಾರಿಯಾದ ಆರೋಪಿತರು ರಹದಾರಿ ವಗೈರೆ ಇಲ್ಲದೇ ಕಳ್ಳಸಾಗಾಣಿಕೆ ಮಾಡಲು ಹೊಂಚು ಹಾಕಿ ವಾಹನಗಳನ್ನು ತಂದು ಕಳ್ಳತನ ಮಾಡಿರುವ ಕುರಿತು ಸಂಶಯದ ಮೇರೆಗೆ ಸ್ಥಳದಲ್ಲಿ ಪಂಚಾಯ್ತಿದಾರರನ್ನು ಕರೆಸಿಕೊಂಡು ಸ್ಥಳ ಪಂಚನಾಮೆ ಮುಖೇನ 7 ಚೀಲ ಶ್ರೀಗಂಧದ ತುಂಡುಗಳನ್ನು ಸ್ಥಳದಲ್ಲಿ ಅಳತೆ ಮಾಡಿ ಅದಕ್ಕೆ ಕ್ರಮ ಸಂಖ್ಯೆಯನ್ನು ಕೊಟ್ಟು ತೂಕ ಮಾಡಿಸಲಾಗಿ ಒಟ್ಟು 128 ಕೆ.ಜಿ. ಶ್ರೀಗಂಧ ಇದ್ದು, ಚೀಲಗಳಿಗೆ ಸಹ ಕ್ರಮ ಸಂಖ್ಯೆ ಕೊಟ್ಟು ಕಾರು ಮತ್ತು ವ್ಯಾನಿನ ಸಮೇತ ಪಂಚನಾಮೆ ಮುಖೇನ ಅಮಾನತ್ತುಪಡಿಸಿಕೊಂಡಿರುತ್ತೇನೆ. ಗೋಡೆಗೆ ತಾಕಿಸಿದ ಏಣಿಯ ಮುಖೇನ ಕಾಂಪೌಂಡ್ ಒಳಭಾಗದಲ್ಲಿ ನೋಡಲಾಗಿ ಅಲ್ಲೂ ಸಹ 10 ಚೀಲ ಶ್ರೀಗಂಧ ಬಿದ್ದಿರುವುದು ಕಂಡು ಕಾಂಪೌಂಡಿನ ಒಳಗೆ ಪ್ರವೇಶಮಾಡಿ ಶ್ರೀ ಬಿ. ಕೆ. ರೆಡ್ಡರ್, ವಲಯ ಅರಣ್ಯಾಧಿಕಾರಿ, ಇವರ ಸಮ್ಮುಖದಲ್ಲಿ ಒಳಭಾಗದಲ್ಲಿ ಬಿದ್ದಿದ್ದ ಗೋಣಿಚೀಲಗಳಲ್ಲಿ ಶ್ರೀಗಂಧ ಇರುವುದು ಕಂಡು, ತೂಕ ಮಾಡಿಸಲಾಗಿ 287 ಕೆ. ಜಿ. ಶ್ರೀಗಂಧ ಇರುವುದು ಕಂಡುಬಂದಿತು. ಇದು ಶ್ರೀಗಂಧದ ಕೋಠಿಯಿಂದ ಕಳುವಾಗಿತ್ತೆಂದು ಶ್ರೀ ರೆಡ್ಡರ್, ವಲಯ ಅರಣ್ಯಾಧಿಕಾರಿ ತಿಳಿಸಿದ ಮೇರೆಗೆ ಇದು ಕಾಂಪೌಂಡ್ ಒಳಭಾಗದಲ್ಲಿ ಇರುವ ಕಾರಣ 10 ಚೀಲದಲ್ಲಿ ಇದ್ದ 287 ಕೆ. ಜಿ. ಶ್ರೀಗಂಧದ ತುಂಡುಗಳನ್ನು ಸ್ಥಳದಲ್ಲಿ ಅವರ ವಶಕ್ಕೆ ಕೊಟ್ಟಿರುತ್ತೇನೆ.

ಮೇಲ್ಕಂಡ ಕೃತ್ಯಕ್ಕೆ ಸಂಬಂಧಿಸಿದ ಅಂಬಾಸಿಡರ್ ಕಾರು ನಂ. ಎಂವೈಜೆ 5707 ಮಾರುತಿ ಓಮಿನಿ ವ್ಯಾನು ನಂ. ಕೆಎ-01-ಎಂ-2170 ಇವುಗಳನ್ನು ಅಮಾನತ್ತುಪಡಿಸಿಕೊಂಡಿರುತ್ತೇನೆ. ಈ ಸಂದರ್ಭದಲ್ಲಿ ಸ್ಥಳದಲ್ಲಿ ಮಾಡಿದ ಸ್ಥಳ ಮಹಜರನ್ನು ನಿಶಾನೆ ಪಿ1 ಎಂದು, ಅದರಲ್ಲಿರುವ ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ1ಎ ಎಂದು ಗುರುತಿಸಲಾಯಿತು. ನಂತರ ಪೊಲೀಸ್ ಠಾಣೆಗೆ ಬಂದು ಸರ್ಕಾರದ ಪರವಾಗಿ ಸ್ವದೂರನ್ನು ದಾಖಲು ಮಾಡಿದ್ದು, ಮೊಕದ್ದಮೆ ಸಂಖ್ಯೆ: 220/2001 ರಲ್ಲಿ ನೋಂದಾಯಿಸಿಕೊಂಡು ಪ್ರಥಮ ವರ್ತಮಾನವನ್ನು ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಕಳುಹಿಸಿಕೊಟ್ಟಿದ್ದು, ಸದರಿ ಎಫ್‌ಐಆರ್‌ನ್ನು ನಿಶಾನೆ ಪಿ2. ಸಾಕ್ಷಿಯ ಸಹಿ ಪಿ2ಎ ಆಗಿರುತ್ತದೆ. ಸ್ಯಾಂಡೆಲ್ ಕೋಠಿಯ ಒಳಗಡೆ ಮಾಡಿದ ಮಹಜರ್ ನಿಶಾನೆ ಪಿ3 ಆಗಿದ್ದು, ಸಾಕ್ಷಿಯ ಸಹಿ ಪಿ3ಎ ಆಗಿರುತ್ತದೆ. ದಿನಾಂಕ: 31.10.01 ರಂದು ಬಿ. ಕೆ. ರೆಡ್ಡರ್, ವಲಯ ಅರಣ್ಯಾಧಿಕಾರಿ, ಶ್ರೀಗಂಧದ ಕೋಠಿ, ತರೀಕೆರೆ ಇವರು ಪೋಲಿಸ್ ಠಾಣೆಗೆ ಬಂದು ಫಿರ್ಯಾದನ್ನು ನೀಡಿದ್ದು, ಅದನ್ನು ಸಹ ನೋಂದಾಯಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ನಿಶಾನೆ ಪಿ4 ಹಾಗೂ ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ4ಎ ಆಗಿರುತ್ತದೆ. ನಂತರ ಪ್ರಕರಣದ ಮುಂದಿನ ತನಿಖೆಯ ಬಗ್ಗೆ ಪೋಲಿಸ್ ಇನ್ಸ್‌ಪೆಕ್ಟರ್ ರವರಾದ ರುದ್ರೇಶ್ ರವರಿಗೆ ವಹಿಸಿಕೊಟ್ಟಿರುವುದಾಗಿ ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರು ಹಾಗೂ ಅರ್ಜಿದಾರರ ಪರ ವಕೀಲರಿಗೆ ಅನೇಕ ಬಾರಿ ನೋಟೀಸ್ ಕಳುಹಿಸಿದರೂ ಸಹ ನ್ಯಾಯಾಲಯಕ್ಕೆ ಹಾಜರಾಗದೇ ಗೈರುಹಾಜರಾಗಿರುವುದರಿಂದ ಪಾಟೀಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

ದಿನಾಂಕ: 9.6.2004 ರಂದು ಶ್ರೀಗಂಧದ ಕೋಠಿ ವಲಯ ಅರಣ್ಯಾಧಿಕಾರಿ ಶ್ರೀ ಬಿ. ಕೆ. ರೆಡ್ಡರ್ ಇವರು ಈ ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿದ್ದು, ದಿನಾಂಕ: 18.10.2001 ರಂದು ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಶ್ರೀ ಖಾಸಿಂ ಇವರು ತಿಳಿಸಿದ ಮೇರೆಗೆ ಶ್ರೀಗಂಧದ ಕೋಠಿಯ ಒಳಗಡೆ ಇದ್ದ ಶ್ರೀಗಂಧವು ಕಳ್ಳತನ ಆಗಿದ್ದು, ಸದರಿ ಶ್ರೀಗಂಧವನ್ನು ಅಂಬಾಸಿಡರ್ ಕಾರು ಸಂಖ್ಯೆ: ಎಂವೈಜಿ 5707, ಮಾರುತಿ ಓಮಿನಿ ವ್ಯಾನು ನಂ. ಕೆಎ-01-ಎಂ-2170 ರಲ್ಲಿ ಸಾಗಾಣಿಕೆಗೆ ಸಿದ್ಧವಾಗಿರುವುದು ಕಂಡು ಬಂತು, ಅಲ್ಲದೇ ಶ್ರೀಗಂಧ ಕೋಠಿಯ ಆವರಣದಲ್ಲಿ 10 ಚೀಲ ಶ್ರೀಗಂಧದ ತುಂಡುಗಳು ತುಂಬಿ ಬಿದ್ದಿರುವುದು ಕಂಡು ಬಂದವು. ಈ ಬಗ್ಗೆ ಪೋಲಿಸ್ ಸಿಬ್ಬಂದಿಗಳು ಸ್ಥಳದಲ್ಲಿ ಮಾಡಿದ ಸ್ಥಳ ಮಹಜರ್‌ಗೆ ನಾನು ಸಹ ಸಹಿ ಮಾಡಿದ್ದು, ಅದನ್ನು ನಿಶಾನೆ ಪಿ1ಬಿ ಎಂದು ಗುರುತಿಸಲಾಯಿತು. ಶ್ರೀಗಂಧದ ಕೋಠಿಯಲ್ಲಿ

ಶ್ರೀಗಂಧ ಕಳ್ಳತನ ಆದ ಬಗ್ಗೆ ಪೋಲಿಸ್ ಠಾಣೆಯಲ್ಲಿ ಕ್ರೈಂ ನಂ. 220/02 ರಲ್ಲಿ ಪ್ರಕರಣವನ್ನು ದಾಖಲು ಮಾಡಿರುತ್ತೇನೆ. ಕಾರು, ವ್ಯಾನು ಮತ್ತು ಶ್ರೀಗಂಧವನ್ನು ನೋಡಿದರೆ ಗುರುತ್ತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರು ಹಾಗೂ ಅವರ ಪರ ವಕೀಲರು ಗೈರುಹಾಜರಾಗಿರುವುದರಿಂದ, ಪಾಟೀಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಮೇಲ್ಕಂಡ ಪಿಡಬ್ಲ್ಯೂ 1 ಮತ್ತು ಪಿಡಬ್ಲ್ಯೂ 2 ಸಾಕ್ಷಿದಾರರು ನೀಡಿದ ಹೇಳಿಕೆ ಮತ್ತು ಸ್ಥಳ ಮಹಜರಿನಲ್ಲಿರುವ ಎಲ್ಲಾ ಅಂಶಗಳಿಗೂ ಒಂದಕ್ಕೊಂದು ತಾಳೇ ಹೊಂದಿದ್ದು, ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅಲ್ಲದೇ ಕಾನೂನು ಪ್ರಕಾರ ಎಲ್ಲಾ ದಾಖಲಾತಿಗಳನ್ನು ಸಿದ್ದಪಡಿಸಿ ನ್ಯಾಯಾಲಯಕ್ಕೆ ಹಾಜರುಪಡಿಸಿ ಗುರುತಿಸಿಕೊಂಡಿದ್ದು, ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಎಂವೈಜಿ 5707 ಹಾಗೂ ಮಾರುತಿ ಓಮಿನಿ ವ್ಯಾನು ಸಂಖ್ಯೆ: ಕೆಎ-01-ಎಂ-2170 ರಲ್ಲಿ ಸರ್ಕಾರದ ಸೊತ್ತಾದ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣಿಕೆ ಸಂಬಂಧ ಅಮಾನತ್ತುಪಡಿಸಿರುವುದು ಹಾಗೂ ಅರಣ್ಯ ಅಪರಾಧ ಪ್ರಕರಣ ದಾಖಲಾಗಿರುವುದು ದೃಢಪಟ್ಟಿದ್ದು. ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:2**

ಅರ್ಜಿದಾರರು/ ವಾಹನದ ಮಾಲೀಕರು ಅವರ ಪರವಾಗಿ ಅವರ ನ್ಯಾಯವಾದಿಗಳು ವಾಹನಗಳನ್ನು ಬಿಡುಗಡೆ ಮಾಡಲು ದಿನಾಂಕ: 18.1.2002 ರಂದು ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಬಿ) ಪ್ರಕಾರ ದಿನಾಂಕ: 22.1.2002 ರಂದು ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ಅವರ ವಕೀಲರ ಮುಖಾಂತರ ದಿನಾಂಕ: 8.2.2002 ರಂದು ಸಮಜಾಯಿಸಿ ನೀಡಿರುತ್ತಾರೆ. ಅವರ ಸಮಜಾಯಿಸಿಯ ಪ್ರಕಾರ ವಾಹನವು ಡ್ರೈವರ್ ಸಂಗಡ ಬಾಡಿಗೆಗೆ ಕಳುಹಿಸಿದ್ದ ಸಂದರ್ಭದಲ್ಲಿ ಪೊಲೀಸ್ ಸಿಬ್ಬಂದಿ ವರ್ಗದವರು ವಾಹನವನ್ನು ತಡೆದು ವಾಹನದ ಮೇಲೆ ಸುಳ್ಳು ಪ್ರಕರಣವನ್ನು ದಾಖಲು ಮಾಡಿರುತ್ತಾರೆ. ಸದರಿ ಕೃತ್ಯಕ್ಕೂ ವಾಹನದ ಮಾಲೀಕರಿಗೂ ಯಾವುದೇ ಸಂಬಂಧ ಇರುವುದಿಲ್ಲ. ವಾಹನಗಳನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ. ಅವರ ಮಧ್ಯಂತರ ಅರ್ಜಿಯನ್ನು ಈ ನ್ಯಾಯಾಲಯವು ವಿಚಾರಣೆ ಬಾಕಿಯಿರಿಸಿಕೊಂಡು ವಾಹನ ತಾತ್ಕಾಲಿಕ ಬಿಡುಗಡೆ ಕೋರಿಕೆಯನ್ನು ತಿರಸ್ಕರಿಸಿರುತ್ತದೆ.

ಈ ಪ್ರಕರಣದಲ್ಲಿ ವಾಹನದ ಮಾಲೀಕರುಗಳಿಗೆ ಈ ನ್ಯಾಯಾಲಯಕ್ಕೆ ವಿಚಾರಣೆಗೆ ಹಾಜರಾಗಲು 12.11.2003, 7.01.2004, 3.3.2004, 28.4.2004 ಹಾಗೂ 9.6.2004 ರಂದು ನೋಟೀಸ್ ನೀಡಿರುತ್ತದೆ. ವಾಹನದ ಮಾಲೀಕರು/ ಹಾಗೂ ಅವರ ಪರ ವಕೀಲರು ನ್ಯಾಯಾಲಯಕ್ಕೆ ಹಾಜರಾಗದೇ ಗೈರುಹಾಜರಾಗಿರುತ್ತಾರೆ. ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ಈ ಪ್ರಕರಣದಲ್ಲಿ ಅಕ್ರಮ ಸಾಗಾಣಿಕೆ ಮಾಡುತ್ತಿದ್ದ ಶ್ರೀಗಂಧವು ಅರಣ್ಯ ಕಾಯ್ದೆ ವಿಧಿ 2(7)ರ ಪ್ರಕಾರ ಅರಣ್ಯ ಉತ್ಪನ್ನವಾಗಿದ್ದು, ಕರ್ನಾಟಕ ಅರಣ್ಯ ಕಾಯಿದೆ ವಿಧಿ 80ರ ಪ್ರಕಾರ ಸರ್ಕಾರದ ಸೊತ್ತಾಗಿರುತ್ತದೆ. ವಾಹನಗಳ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನಗಳನ್ನು ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ರಹದಾರಿ ಇಲ್ಲದೇ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತಮ್ಮ ಗಮನಕ್ಕೆ ಬಾರದಂತೆ ಕೃತ್ಯ ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಾಧಾರಗಳನ್ನು ವಾಹನಗಳ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನಗಳಲ್ಲಿ ಅರಣ್ಯ ಉತ್ಪನ್ನವಾದ ಶ್ರೀಗಂಧ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರ ನೀಡಿರುವುದಿಲ್ಲ. ವಾಹನಗಳಲ್ಲಿ ತಮ್ಮ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71 ಬಿ (2) ರ ರೀತ್ಯಾ ಸಾಬೀತುಪಡಿಸುವ ಜವಾಬ್ದಾರಿ ವಾಹನಗಳ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನಗಳ ಮಾಲೀಕರ ಏಜೆಂಟರಾಗಲೀ, ಚಾಲಕನಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನಗಳಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದೂ ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ. ಈ ವಾಹನಗಳಲ್ಲಿ ಅರಣ್ಯ ಉತ್ಪನ್ನಗಳನ್ನು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಾಧಿಕಾರದಲ್ಲಿ ಸಾಬೀತುಪಡಿಸಲು ವಾಹನಗಳ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ವಾಹನಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ.

ಈ ಪ್ರಕರಣದಲ್ಲಿ ಅರ್ಜಿದಾರರು/ ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿದ್ದರೂ ಸಹ ಹಾಜರಾಗದೆ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ಅವರ ಪರ ವಾದ ಮಾಡಲು ನೇಮಿಸಿದ ವಕೀಲರು ಸಹ ಯಾವ ವಿಚಾರಣೆಗೂ ಹಾಜರಾಗಿರುವುದಿಲ್ಲ ಮತ್ತು ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಮೇಲೆ ಹೇಳಲಾದ ವಾಹನವನ್ನು ನೇರವಾಗಿ ಅರಣ್ಯ ಉತ್ಪನ್ನ ಅಕ್ರಮ ಕಳ್ಳಸಾಗಾಣಿಕೆಗೆ ಬಳಸಿರುವುದು ಈ ಪ್ರಕರಣದ ವಿಚಾರಣೆಯಿಂದ ಹಾಗೂ ದಾಖಲಾತಿಗಳ ಪರಿಶೀಲನೆಯಿಂದ ದೃಢಪಟ್ಟಿರುತ್ತದೆ. ಆದ್ದರಿಂದ ಅಂಶ-2ನ್ನು ಇಲ್ಲ ಎಂದು ಪರಿಗಣಿಸಲಾಯಿತು.

**ಅಂತಿಮ ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯ್ದೆ 1963 ಸೆಕ್ಷನ್ 71 ಎ(2)ನೇ ತಿದ್ದುಪಡಿ ಪ್ರಕಾರ ಅಂಬಾಸಿಡರ್ ಕಾರು ಎಂವೈಜಿ 5707 (ಇಂಜಿನ್ ನಂ. 4159 New BME 9 Eng ಛಾಸೀಸ್ ನಂ. 111-253193-OEM 06238) ಮಾರುತಿ ಓಮಿನಿ ವ್ಯಾನು ನೋಂದಾವಣೆ ಸಂಖ್ಯೆ: ಕೆಎ-01-ಎಂ-2170 (ಇಂಜಿನ್ ನಂ. 576340 ಛಾಸೀಸ್ ನಂ. 859711) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಾಣಿಕೆಗೆ ಸಿದ್ದವಾಗಿದ್ದ ಏಳು ಚೀಲಗಳಲ್ಲಿದ್ದ ಒಟ್ಟು ಹನ್ನೆರಡು ಶ್ರೀಗಂಧದ ತುಂಡು ತೂಕ 128 ಕೆ.ಜಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಕಂಡ ಅವಧಿ ಮೀರಿದ ಬಳಿಕ ವಾಹನಗಳು ಹಾಗೂ ಶ್ರೀಗಂಧದ ತುಂಡುಗಳನ್ನು ಕಾನೂನು ರೀತ್ಯಾ ವಿಲೇಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 28.7.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತದೆ.

**ಅನುಬಂಧ**

**ಫಿರ್ಯಾದಿದಾರರ ಸಾಕ್ಷಿಗಳ ವಿಚಾರಣೆ**

1. ಪಿಡಬ್ಲ್ಯೂ 1 ಬಿ.ಎಂ. ಖಾಸಿಂ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಲಿಂಗದಹಳ್ಳಿ
2. ಪಿಡಬ್ಲ್ಯೂ 2 ಬಿ. ಕೆ. ರೆಡ್ಡರ್, ವಲಯ ಅರಣ್ಯಾಧಿಕಾರಿ, ಶ್ರೀಗಂಧದ ಕೋಠಿ, ತರೀಕೆರೆ

ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ

1. ಪಿ1 ಸ್ಥಳ ಮಹಜರ್
2. ಪಿ1ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ
3. ಪಿ1ಬಿ ಪಿಡಬ್ಲ್ಯೂ 2 ಸಾಕ್ಷಿದಾರರ ಸಹಿ
4. ಪಿ2 ಪ್ರಥಮ ಮಾಹಿತಿ ವರದಿ
5. ಪಿ2ಎ ಫಿರ್ಯಾದಿದಾರರ ಸಹಿ
6. ಪಿ3 ಸ್ಯಾಂಡಲ್ ಕೋಠಿ ಒಳಭಾಗದಲ್ಲಿ ಮಾಡಿದ ಮಹಜರ್
7. ಪಿ3ಎ ಫಿರ್ಯಾದಿದಾರರ ಸಹಿ
8. ಪಿ4 ವಲಯ ಅರಣ್ಯಾಧಿಕಾರಿ, ಸ್ಯಾಂಡಲ್ ಕೋಠಿ, ತರೀಕೆರೆ ಇವರು ಪೊಲೀಸ್ ಠಾಣೆಗೆ ನೀಡಿದ ಫಿರ್ಯಾದು
9. ಪಿ4ಎ ಫಿರ್ಯಾದಿದಾರರ ಸಹಿ

**ಎಕ್ಸಿಬಿಟ್-1**

ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ

**ಎಕ್ಸ್‌ಬಿಟ್-2**

ಮಧ್ಯಂತರ ಅರ್ಜಿಯ ಬಗ್ಗೆ ಆದೇಶ ದಿನಾಂಕ: 16.7.2003

ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ

ಯಾವುದೂ ಇರುವುದಿಲ್ಲ.

**ಸೀಮಾ ಗರ್ಗ್**

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.1150

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ನಂ. ಎಲ್‌ಆರ್‌ಎಫ್: ಸಿಆರ್:156/2003-04 ಬೆಂಗಳೂರು ದಿನಾಂಕ: 30ನೇ ಜುಲೈ 2004**

**ವಿಷಯ :** ಸೇಂಟ್ ಕ್ಲಾರಾ ಎಜುಕೇಷನಲ್ ಸೊಸೈಟಿ (ರಿ), ಹುಣಸೇಮರದ ಪಾಳ್ಯ ರಾಮೋಹಳ್ಳಿ ಕುಂಬಳಗೋಡು ಪೋಸ್ಟ್, ಬೆಂಗಳೂರು-50 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ ಭೀಮನಕುಪ್ಪೆ ಗ್ರಾಮದ ಸ.ನಂ. 37/1 ರಲ್ಲಿ 0-10 ಗುಂಟೆ ಮತ್ತು 38 ರಲ್ಲಿ 1-10 ಎಕರೆ ಒಟ್ಟು 1-20 ಎಕರೆ (ಒಂದು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ/47/ಶಾಸನ/2001/ ಬೆಂಗಳೂರು ದಿನಾಂಕ: 23.4.2003.
2. ಸೇಂಟ್ ಕ್ಲಾರಾ ಎಜುಕೇಷನಲ್ ಸೊಸೈಟಿ (ರಿ), ಹುಣಸೇಮರದ ಪಾಳ್ಯ, ರಾಮೋಹಳ್ಳಿ, ಕುಂಬಳಗೋಡು ಪೋಸ್ಟ್, ಬೆಂಗಳೂರು-50 ರವರ ಮನವಿ ದಿನಾಂಕ: 12.02.2004.
3. ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ನಂ.ಎಲ್‌ಆರ್‌ಎಫ್ ಸಿಆರ್:(109)6:2004-05 ದಿನಾಂಕ: 09.07.2004.

ಸೇಂಟ್ ಕ್ಲಾರಾ ಎಜುಕೇಷನಲ್ ಸೊಸೈಟಿ (ರಿ), ಹುಣಸೇಮರದ ಪಾಳ್ಯ ರಾಮೋಹಳ್ಳಿ ಕುಂಬಳಗೋಡು ಪೋಸ್ಟ್, ಬೆಂಗಳೂರು-50 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ ಭೀಮನಕುಪ್ಪೆ ಗ್ರಾಮದ ಸ.ನಂ. 37/1 ರಲ್ಲಿ 0-10 ಗುಂಟೆ ಮತ್ತು 38 ರಲ್ಲಿ 1-10 ಎಕರೆ ಒಟ್ಟು 1-20 ಎಕರೆ (ಒಂದು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ನಂ: ಎಲ್‌ಆರ್‌ಎಫ್:ಸಿಆರ್:(109) 6/2004-05 ದಿನಾಂಕ: 09.07.2004 ರಲ್ಲಿ ಪ್ರಸ್ತಾಪಿತ ಗ್ರಾಮಗಳು ಮೇಲ್ಕಂಡ ಸ.ನಂ. 37/1 ರಲ್ಲಿ 0-10 ಗುಂಟೆ ಮತ್ತು 38 ರಲ್ಲಿ 1-10

ಎಕರೆ ಒಟ್ಟು 1-20 ಎಕರೆ (ಒಂದು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ, ಕೆಂಗೇರಿ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 10.06.1993 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ. 37/1 ರಲ್ಲಿ 0-10 ಗುಂಟೆ ಮತ್ತು 38 ರಲ್ಲಿ 1-10 ಎಕರೆ ಒಟ್ಟು 1-20 ಎಕರೆ (ಒಂದು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಸೇಂಟ್ ಕ್ಲಾರಾ ಎಜುಕೇಷನಲ್ ಸೊಸೈಟಿ (ರಿ), ಹುಣಸೇಮರದ ಪಾಳ್ಯ, ರಾಮೋಹಳ್ಳಿ, ಕುಂಬಳಗೋಡು ಪೋಸ್ಟ್, ಬೆಂಗಳೂರು-50 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರೀ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್.1153 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

## ಅಧಿಸೂಚನೆ

### ನಂ. ಎಲ್‌ಆರ್‌ಎಫ್ (ಕಲಂ 109) ಸಿಆರ್:08:2004-05 ದಿನಾಂಕ: 6ನೇ ಆಗಸ್ಟ್ 2004

ಕೋಲಾರ ತಾಲ್ಲೂಕು, ಕಸಬಾ ಹೋಬಳಿ, ಬಾರಾಂಡಹಳ್ಳಿ ಗ್ರಾಮದ ಸ.ನಂ. 30/1 ರಲ್ಲಿ 1-27 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಬಿ.ಎಡ್. ಮತ್ತು ಡಿ.ಎಡ್(ಟಿ.ಟಿ.ಐ) ಕಾಲೇಜು ಸ್ಥಾಪನೆಗಾಗಿ) ಗುತ್ತಿಗೆಗೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಕಾರ್ಯದರ್ಶಿ, ರವಿ ಶಿಕ್ಷಣಾ ಸಂಸ್ಥೆ, ಮೂರಾಂಡಹಳ್ಳಿ, ಅರಹಳ್ಳಿ ಅಂಚೆ, ಕೋಲಾರ ತಾಲ್ಲೂಕು, ಅಂಚೆ ವಿಳಾಸ 2ನೇ ಕ್ರಾಸ್, ಗೌರಿಪೇಟೆ, ಕೋಲಾರ ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಕೋಲಾರ ತಾಲ್ಲೂಕು ರವರು ಪತ್ರ ಸಂಖ್ಯೆ ತಕಕೋ. LRF CR 48/2004-05 ದಿನಾಂಕ: 30.07.2004 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ

ಕಮೀಷನರ್ ಕೋಲಾರ ಉಪ ವಿಭಾಗ ರವರು ಪತ್ರ ಸಂ. ಎಲ್ಆರ್ಎಫ್:ಸಿಆರ್:6:2004-05 ದಿನಾಂಕ: 02.08.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಗುತ್ತಿಗೆಗೆ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಬಾರಾಂಡಹಳ್ಳಿ ಗ್ರಾಮದ ಸ.ನಂ. 30/1 ರ 1-27 ಎಕರೆ ಜಮೀನಿನ ಖಾತೆ ಶ್ರೀ ಇ.ಗೋಪಾಲಪ್ಪ ಬಿನ್ ಈರಪ್ಪ ಎಂಬುವವರ ಹೆಸರಿನಲ್ಲಿದ್ದು ಮೇಲ್ಕಂಡ ಜಮೀನು ಸದರಿಯವರಿಗೆ ಪವತಿವಾರ್ಸ್ ಮೂಲಕ ಬಂದಿರುತ್ತೆ. ಸದರಿ ಜಮೀನನ್ನು ಖಾತೆದಾರರು ಅರ್ಜಿದಾರರಿಗೆ 35 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲು ಒಪ್ಪಿ ಗುತ್ತಿಗೆ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನು ಹಿಡುವಳಿ ಜಮೀನಾಗಿರುತ್ತೆ. ಈ ಜಮೀನು ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ಕಾಯ್ದೆ/ ನಿಯಮಗಳು: ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನಿನ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಪ್ರಸ್ತಾಪಿತ ಜಮೀನಿಗೆ ಸಂಪರ್ಕ ರಸ್ತೆ ಇದ್ದು ಅರ್ಜಿದಾರರ ಉದ್ದೇಶಕ್ಕೆ ಅನುಕೂಲವಾಗಿರುತ್ತೆ. ಸದರಿ ಜಮೀನು ಮೂರಾಂಡಹಳ್ಳಿ ಗ್ರಾಮ ಠಾಣೆಗೆ ಲಗತ್ತಾಗಿರುತ್ತೆ. ಸದರಿ ಜಮೀನಿನಲ್ಲಿ ಸರ್ಕಾರಕ್ಕೆ ಉಳಿಸಿಕೊಳ್ಳಬೇಕಾದ ಬಾಬುಗಳು ಇರುವುದಿಲ್ಲ. ರವಿ ಶಿಕ್ಷಣ ಸಂಸ್ಥೆಯು ನೋಂದಣಾಧಿಕಾರಿಗಳು ಕೋಲಾರ ಜಿಲ್ಲೆ ಕೋಲಾರ (Registrar of Societies, Kolar District, Kolar)ರವರ ಕಛೇರಿಯಲ್ಲಿ ನಂ. 96/96-97 ದಿನಾಂಕ: 12.8.96 ರಂತೆ ನೋಂದಾವಣೆಯಾಗಿರುತ್ತೆ. ಸರ್ಕಾರಿ ಆದೇಶದ ಸಂಖ್ಯೆ ಇಡಿ 373 ಯುಆರ್ಸಿ 2003 ಬೆಂಗಳೂರು ದಿನಾಂಕ: 28.12.2003 ರಂತೆ ಅರ್ಜಿದಾರರಿಗೆ ಬಿ.ಎಡ್. ಕಾಲೇಜು ನೂರು ಮಂದಿ ವಿದ್ಯಾರ್ಥಿಗಳೊಂದಿಗೆ ಸ್ಥಾಪಿಸಲು ಮತ್ತು ಸರ್ಕಾರಿ ಆದೇಶ ನಂ. ಇಡಿ 154 ಪಿಟಿಐ 2003 (428) ಬೆಂಗಳೂರು ದಿನಾಂಕ: 29.10.2003 ರಂತೆ 45 ವಿದ್ಯಾರ್ಥಿಗಳೊಂದಿಗೆ ಟಿಟಿಐ (D.Ed Course) ಸ್ಥಾಪಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಿರುತ್ತೆ. ಅರ್ಜಿದಾರರು ಸಲ್ಲಿಸಿರುವ ದಾಖಲೆಗಳು ಮೇಲ್ಕಂಡ ಉದ್ದೇಶಗಳಿಗೆ ಪೂರಕವಾಗಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಂತೆ ಶೈಕ್ಷಣಿಕ ಉದ್ದೇಶಗಳಿಗಾಗಿ ನಾಲ್ಕು ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ ಬೆಂಗಳೂರು ದಿನಾಂಕ: 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ ತಿದ್ದುಪಡಿಯನ್ನು ತಂದಿದ್ದು ಇದರಂತೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಎರಡು ಯೂನಿಟ್‌ಗಳಿಗೆ ಮೀರದಂತೆ ಕ್ರಯಕ್ಕೆ: ದಾನಕ್ಕೆ: ಗುತ್ತಿಗೆಗೆ ಪಡೆಯಲು ಅನುಮತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ಕ್ಕೆ ಅನುಗುಣವಾಗಿರುತ್ತೆ.

ಮೇಲ್ಕಂಡ ಅಂಶಗಳಡಿಯಲ್ಲಿ ಕೋಲಾರ ತಾಲ್ಲೂಕು ಕಸಬಾ ಹೋಬಳಿ ಬಾರಾಂಡಹಳ್ಳಿ ಗ್ರಾಮದ ಸ.ನಂ.30/1ರಲ್ಲಿ 1 ಎಕರೆ 27 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ 35 ವರ್ಷಗಳ ಅವಧಿಗೆ (ಬಿ.ಎಡ್. ಮತ್ತು ಡಿ.ಎಡ್ (ಟಿ.ಟಿ.ಐ) ಕಾಲೇಜ್ ಸ್ಥಾಪನೆಗಾಗಿ) ಗುತ್ತಿಗೆಗೆ ಪಡೆಯಲು (ಪರಭಾರೆ ಮಾಡಿಕೊಳ್ಳಲು) ಕಾರ್ಯದರ್ಶಿ, ರವಿ ಶಿಕ್ಷಣ ಸಂಸ್ಥೆ, ಮೂರಾಂಡಹಳ್ಳಿ, ಅರಹಳ್ಳಿ ಅಂಚೆ, ಕೋಲಾರ ತಾಲ್ಲೂಕು, ಅಂಚೆ ವಿಳಾಸ 2ನೇ ಕ್ರಾಸ್, ಗೌರಿಪೇಟೆ, ಕೋಲಾರ) ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಸದರಿ ಜಮೀನಿನ ಉತ್ತರಕ್ಕೆ ಮೂರಾಂಡಹಳ್ಳಿಗೆ ಹೋಗುವ ರಸ್ತೆ ಇರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (I) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಬಿ. ಎಸ್. ರಾಮಪ್ರಸಾದ್**

ಪಿ.ಆರ್.1152

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**
**ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**
**ನಂ: ಇಎಕ್ಸ್‌ಇ:3:ಸಿಆರ್‌ಎಂ:87/99-2000 ದಿನಾಂಕ: 8ನೇ ಜುಲೈ 2004**

**ಉಪಸ್ಥಿತರು :** ಶ್ರೀ ಮಹಮದ್ ಇಲಿಯಾಸ್ ಅಹಮದ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದಿದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| 1. ವಿರಾಜಪೇಟೆ ಅಬಕಾರಿ ವಲಯ ನಿರೀಕ್ಷಕರು. | | 1. ಸಂಪಂಗಿ, ತಂದೆ ಗುರುರಾಜು, ಮ.ನಂ. 525-2, 12ನೇ ಕ್ರಾಸ್, ಬೆಂಗಳೂರು.<br>2. ಎಂ. ಕೆ. ಸಂತೋಷ್, ತಂದೆ ಕೆ. ಕರುಣಾಕರನ್ ಎಂ.ಎಂ.ಕೆ. ಹೌಸ್.<br>3. ರಾಘವೇಂದ್ರ, ತಂದೆ ಸಂಪಂಗಿ, ವಯಾಲಿಕಾವಲ್, ಬೆಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 12.6.2000 ರಂದು ವಿರಾಜಪೇಟೆ ತಾಲ್ಲೂಕು ಮಾಕುಟ್ಟ ಅರಣ್ಯ ತನಿಖಾ ಠಾಣೆಯಲ್ಲಿ ಅರಣ್ಯ ಇಲಾಖಾ ಸಿಬ್ಬಂದಿಯವರು ಕರ್ತವ್ಯದಲ್ಲಿದ್ದಾಗ ವಿರಾಜಪೇಟೆ ಕಡೆಯಿಂದ ಮಾಕುಟ್ಟ ಮಾರ್ಗವಾಗಿ ಕೇರಳದ ಕಡೆಗೆ ಬರುತ್ತಿದ್ದ ಲಾರಿ ನಂ. ಸಿ.ಎ.ಎಂ. 3021 ರನ್ನು ಅರಣ್ಯ ಇಲಾಖಾ ಸಿಬ್ಬಂದಿಗಳು ತಡೆದು ನಿಲ್ಲಿಸಿ ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆ ಬಗ್ಗೆ ತಪಾಸಣೆ ನಡೆಸಿದಾಗ ಲಾರಿಯಲ್ಲಿ ಟಾರ್ಪಾಲನ್ನು ಮುಚ್ಚಿದ್ದು ಅದನ್ನು ಬಿಚ್ಚಿಸಿ ನೋಡಲಾಗಿ ದನದ ಮೇವು ತುಂಬಿದ ಚೀಲಗಳಿದ್ದು ಸಂಶಯದಿಂದ ಕೆಲವು ಚೀಲಗಳನ್ನು ಬದಿಗೆ ಸರಿಸಿ ನೋಡಿದಾಗ ಚೀಲದ ಕೆಳಗಡೆ ಪ್ಲಾಸ್ಟಿಕ್ ಕ್ಯಾನುಗಳು ಕಂಡು ಬಂದಿದ್ದು ನಂತರ ಕ್ಯಾನುಗಳ ಮುಚ್ಚಳ ತೆಗೆದು ನೋಡಿದಾಗ ಮದ್ಯಸಾರ ತುಂಬಿರುವುದು ಕಂಡುಬಂದಿರುತ್ತದೆ. ಲಾರಿಯಲ್ಲಿ ಮದ್ಯಸಾರವನ್ನು ಸಾಗಾಣಿಕೆ ಮಾಡಲು ಚಾಲಕನಲ್ಲಿ ರಹದಾರಿ ಪತ್ರ ವಗ್ಯೆರೆ ಕೇಳಿದಾಗ ಯಾವುದೂ ಇಲ್ಲವೆಂದು ತಿಳಿಸಿರುತ್ತಾನೆ. ನಂತರ ಚೀಲಗಳನ್ನು ಎಣಿಸಿ ನೋಡಿದಾಗ ಒಟ್ಟು 45 ಚೀಲಗಳಲ್ಲಿ ದನದ ಮೇವು ತುಂಬಿಸಲಾಗಿರುತ್ತದೆ. ಚೀಲಗಳನ್ನು ಬದಿಗೆ ಸರಿಸಿ ಪರಿಶೀಲಿಸಿದಾಗ ಒಟ್ಟು 213 ಪ್ಲಾಸ್ಟಿಕ್ ಕ್ಯಾನುಗಳನ್ನು ತಲಾ 35 ಲೀಟರ್‌ನಂತೆ ಒಟ್ಟು ಅಂದಾಜು 7455 ಲೀಟರ್ ಮದ್ಯಸಾರ ಇರುವುದನ್ನು ಪತ್ತೆಹಚ್ಚಿ ಲಾರಿಯಲ್ಲಿದ್ದ ಆರೋಪಿಗಳಾದ ಸಂಪಂಗಿ, ತಂದೆ ಗುರುರಾಜ; ಎಂ. ಕೆ. ಸಂತೋಷ್, ತಂದೆ ಕರುಣಾಕರನ್ ಹಾಗೂ ಲಾರಿಯ ಮಾಲೀಕರಾದ ರಾಘವೇಂದ್ರ ತಂದೆ ಸಂಪಂಗಿ ಇವರುಗಳನ್ನು, ಲಾರಿ ನಂ.ಸಿಎಎಂ. 3021 ಮತ್ತು ಸೊತ್ತುಗಳ ಸಮೇತ ಸ್ವಾಧೀನಕ್ಕೆ ತೆಗೆದುಕೊಂಡು ಅಬಕಾರಿ ಕಾಯ್ದೆ ಪ್ರಕಾರ ಮುಂದಿನ ಸೂಕ್ತ ಕ್ರಮಕ್ಕಾಗಿ ದಿನಾಂಕ: 13.6.2000 ರಂದು ವಿರಾಜಪೇಟೆ ವಲಯದ ಅಬಕಾರಿ ನಿರೀಕ್ಷಕರ ವಶಕ್ಕೆ ಹಸ್ತಾಂತರಿಸಿರುತ್ತಾರೆ.

ವಿರಾಜಪೇಟೆ ವಲಯದ ಅಬಕಾರಿ ನಿರೀಕ್ಷಕರು ಮೇಲ್ಕಂಡಂತೆ ಲಾರಿ ಮತ್ತು ಸೊತ್ತುಗಳನ್ನು ತಮ್ಮ ಸ್ವಾಧೀನಕ್ಕೆ ಪಡೆದುಕೊಂಡು ಮೇಲ್ಕಂಡ ಆರೋಪಿಗಳ ಮೇಲೆ ವಿರಾಜಪೇಟೆ ವಲಯದ ಅಬಕಾರಿ ನಿರೀಕ್ಷಕರ ಪ್ರ.ವ.ನಂ:15/99-2000, ದಿನಾಂಕ: 13.6.2000 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ಸಂ: ಸಿಎಎಂ. 3021 ಲಾರಿಯ "ಬಿ" ಎಕ್ಸ್ಟ್ರಾಕ್ಟನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಉತ್ತರ ಇವರಿಂದ ಪಡೆದುಕೊಂಡು ಅದರಲ್ಲಿದ್ದಂತೆ ಸದರಿ ವಾಹನದ ಮಾಲೀಕರಾದ ರಾಘವೇಂದ್ರ, ತಂದೆ ಸಂಪಂಗಿ, ಮನೆ ನಂ. 252(ಬಿ), ವಯಾಲಿಕಾವಲ್, ಬೆಂಗಳೂರು-3 ಇವರಿಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ನೋಟೀಸ್ ನೀಡಿ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಪ್ರಾಧಿಕಾರಕ್ಕೆ ಹಾಜರಾಗಲು ದಿನಾಂಕ: 27.6.2000 ರಂದು ಸೂಚಿಸಲಾಗಿತ್ತು.

ಸದರಿ ಕಾರಣ ಕೇಳಿಕೆ ನೋಟಿಸಿಗೆ ಉತ್ತರವಾಗಿ ಸಿ.ಎ.ಎಂ. 3021 ವಾಹನದ ಮಾಲೀಕರು ತಮ್ಮ ಪರ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ಲಾರಿಯನ್ನು ದನದ ಮೇವನ್ನು ಸಾಗಿಸಲು ಬಾಡಿಗೆ ಹೋದ ಸಂದರ್ಭದಲ್ಲಿ ತನಗೆ ತಿಳಿಯದೆ ಈ ತಪ್ಪು ನಡೆದಿರುತ್ತದೆ. ಈ ತಪ್ಪನ್ನು ಮನ್ನಿಸಿ ಲಾರಿಯನ್ನು ಮಧ್ಯಂತರಿಕವಾಗಿ ಬಿಡುಗಡೆಗೆ ನೀಡಬೇಕಾಗಿ ಅವರ ಪರ ವಕೀಲರ ಮೂಲಕ ದಿನಾಂಕ: 27.11.2000 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ನೀಡಿರುತ್ತಾರೆ. ಸದರಿ ವಾಹನದ ಮಾಲೀಕರೇ ಈ ಅಪರಾಧವನ್ನು ಮಾಡಿದ್ದರಿಂದ ಮತ್ತು ಅವರು ತಿಳಿದೇ ಇಂತಹ ಅಕ್ರಮ ಸಾಗಾಣಿಕೆ ಮಾಡಿ ಸರ್ಕಾರಕ್ಕೆ ಮೋಸ ಮಾಡಿದ್ದರಿಂದ ಸದರಿಯವರ ಅರ್ಜಿಯಲ್ಲಿ ವಾಹನವನ್ನು ಮಧ್ಯಂತರ ಬಿಡುಗಡೆಗೆ ಕೋರಿದ ಅರ್ಜಿಯನ್ನು ತಿರಸ್ಕರಿಸಿ ಸದರಿ ಪ್ರಾಧಿಕಾರದಲ್ಲಿ ವಿಚಾರಣೆ ನಡೆಸುವಂತೆ ಸೂಚಿಸಲಾಗಿತ್ತು. ಹಾಗೂ ಸದರಿ ಲಾರಿಯಲ್ಲಿ ವಶಪಡಿಸಿಕೊಂಡ 7.455 ಲೀಟರ್ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಮಂಗಳೂರು ರಾಸಾಯನಿಕ ತಜ್ಞರಿಗೆ ಕಳಿಸಲಾಗಿದ್ದು ಅವರ ವರದಿಯ ಪ್ರಕಾರ ಮದ್ಯಸಾರವು ಮಾನವ ಸೇವನೆಗೆ ಯೋಗ್ಯವಾದ್ದರಿಂದ ಮತ್ತು ಸದರಿ ಮದ್ಯಸಾರವನ್ನು ವಶಪಡಿಸಿಕೊಂಡ ನಂತರ ಯಾರೂ ಅದರ ಮಾಲೀಕತ್ವವನ್ನು ಸಾಬೀತುಪಡಿಸದೆ ಇರುವುದರಿಂದ ಹಾಗೂ ಸದರಿ ಮದ್ಯಸಾರವನ್ನು ವಾಹನದಲ್ಲಿಯೇ ತೆರೆದ ಪ್ರದೇಶದಲ್ಲಿಯೇ ಯಾವುದೇ ಭದ್ರತೆ ಹಾಗೂ ಸುರಕ್ಷತೆ ಇಲ್ಲದೇ ಇಡಲಾದ್ದರಿಂದ ಮತ್ತು ಮದ್ಯಸಾರವು ತೀಕ್ಷ್ಣ ಸ್ವರೂಪದ ದ್ರವವಾಗಿದ್ದು ಬೇಗನೆ ಆವಿ ಆಗುವ ಹಾಗೂ ಹತ್ತಿ ಉರಿಯುವ ದ್ರವವಾಗಿರುತ್ತದೆ. ಆದುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ರಾಸಾಯನಿಕ ಪರೀಕ್ಷೆಗೆ ಹೊರತುಪಡಿಸಿ ಉಳಿದ 7437 ಲೀಟರ್ ಮದ್ಯಸಾರವನ್ನು ಈ ಕಛೇರಿಯ ಆದೇಶ ದಿನಾಂಕ: 4.07.2000 ರಂತೆ ಕಲಂ 43(2) (ಬಿ) ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಸಿಕೊಂಡು ಮೆ: ಮೈಸೂರು ಷುಗರ್ ಕಂ.ಲಿ. ಅಲಪೆ, ಪಡೀಲ್, ಮಂಗಳೂರು ರವರಿಗೆ ಹಂಚಿಕೆ ಮಾಡಿ ಸರ್ಕಾರಕ್ಕೆ ರೂ. 1,41,731.00 ಆದಾಯ ಸಂದಾಯ ಮಾಡಲಾಗಿರುತ್ತದೆ.

ಹಾಗೂ ಈ ಪ್ರಾಧಿಕಾರದಲ್ಲಿ ಸದರಿ ವಾಹನದ ಮೇಲಿನ ಮೊಕದ್ದಮೆಯನ್ನು ಕೈಗೆತ್ತಿಕೊಂಡು ದಿನಾಂಕವನ್ನು ನಿಗದಿಪಡಿಸಿ ಸಮನ್ಸನ್ನು ನೀಡಲಾಗಿದ್ದು, ಸದರಿ ವಾಹನದ ಮಾಲೀಕರು ಕೆಲವೊಮ್ಮೆ ಹಾಜರಾಗಿರುತ್ತಾರೆ. ಆದರೆ ಮೊಕದ್ದಮೆಯ ಅಂತಿಮ ಆದೇಶ ಆಗದ ಕಾರಣ ವಾಹನವು ಇಲಾಖೆಯ ವಶದಲ್ಲಿಯೇ ಇರುತ್ತದೆ. ಆದರೆ ದಿನಾಂಕ: 1.08.2003 ರಿಂದ ಸದರಿ ವಾಹನ ಮಾಲೀಕರಿಗೆ ನೋಂದಣಿ ಅಂಚೆ ಮೂಲಕ ಸಮನ್ಸ್ ರವಾನಿಸಿದಲ್ಲಿ ಎಲ್ಲಾ ಪತ್ರಗಳು ವಾಪಸ್ಸಾಗಿರುತ್ತವೆ. ಕೆಲವೊಮ್ಮೆ ನೋಂದಣಿ ಅಂಚೆ ಸ್ವೀಕೃತಿ ಆಗಿದ್ದರೂ ಸಹ ವಿಚಾರಣೆಗೆ ಹಾಜರಾಗುತ್ತಿರಲಿಲ್ಲವಾದುದರಿಂದ ಅಂತಿಮವಾಗಿ ಸದರಿಯವರಿಗೆ ತಿಳಿಯಪಡಿಸಲು ದಿನಾಂಕ: 6.5.2004 ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದ್ದು 30 ದಿನಗಳೊಳಗಾಗಿ ಸಂಬಂಧಪಟ್ಟವರು ಈ ಪ್ರಾಧಿಕಾರಕ್ಕೆ ಹಾಜರಾಗುವಂತೆ ಸೂಚಿಸಿದ್ದರೂ ಸಹ ಯಾರೂ ಬಾರದ ಕಾರಣ ಮತ್ತು ವಾಹನದ ಮಾಲೀಕರು ಸದರಿ ಲಾರಿಯಲ್ಲಿ ಮದ್ಯಸಾರವನ್ನು ಅಕ್ರಮ ಸಾಗಾಣಿಕೆ ಮಾಡಿ ಅಬಕಾರಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುವುದಾಗಿ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇನ್ನು ಹೆಚ್ಚು ಸಮಯ ತೆರೆದ ಪ್ರದೇಶದಲ್ಲಿ ನಿಲ್ಲಿಸಿದಲ್ಲಿ ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಸದರಿ ಲಾರಿ: ಸಂ:ಸಿಎಎಂ. 3021 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಪ್ರಕರಣದಲ್ಲಿನ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ)ರ ಅಡಿಯಲ್ಲಿ ಸರ್ಕಾರದಿಂದ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ವಿರಾಜಪೇಟೆ ಅಬಕಾರಿ ವಲಯ ನಿರೀಕ್ಷಕರು ಪ್ರ.ವ.ವ.ನಂ. 15/99-2000, ದಿನಾಂಕ: 13.6.2000 ರಲ್ಲಿ ಸ್ವಾಧೀನ ಪಡಿಸಿಕೊಂಡ ಲಾರಿ ನಂ.ಸಿ.ಎ.ಎಂ. 3021 ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 19.7.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ, ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡಿರುವ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಎಂದು ಆದೇಶಿಸಿರುತ್ತೇನೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1154 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ ಮಡಿಕೇರಿ.

**ಸಹಕಾರ ಸಂಘಗಳ ಜಂಟಿ ನಿಬಂಧಕರು, (ಪಟ್ಟಣ ಬ್ಯಾಂಕುಗಳ ವಿಭಾಗ)**
**ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು ಇವರ ನಡವಳಿಗಳು.**
**ಸಂಖ್ಯೆ: ಯುಬಿಸಿ-5/36:ಯುಎಂಸಿ/2003-04 ದಿನಾಂಕ: 5ನೇ ಆಗಸ್ಟ್ 2004**

**ವಿಷಯ :** ದಿ ಕಾವೇರಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ನಿ., ಬೆಂಗಳೂರು ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಎ ರೀತ್ಯಾ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕಾರ್ಯನಿರ್ವಾಹಕ ನಿರ್ದೇಶಕರು, ಭಾರತೀಯ ರಿಸರ್ವ್ ಬ್ಯಾಂಕ್ ಮುಂಬೈ ಇವರ ಆದೇಶ ಸಂಖ್ಯೆ ಯುಬಿಡಿ: ಡಬ್ಲ್ಯೂಬಿಎಸ್:ಬಿಎಸ್‌ಡಿ:(iv) ಎಲ್‌ಆರ್:10-12-03-2035/2003-04 ದಿನಾಂಕ: 2.2.2004.
2. ಕಾರ್ಯನಿರ್ವಾಹಕ ನಿರ್ದೇಶಕರು, ಭಾರತೀಯ ರಿಸರ್ವ್ ಬ್ಯಾಂಕ್ ಮುಂಬೈ ಇವರಪತ್ರ ಸಂಖ್ಯೆ: ಯುಬಿಡಿ/ಬಿಎಸ್‌ಡಿ: (iv) 37/12.03.2035/2003-04 ದಿನಾಂಕ: 2.2.2004

**ಪ್ರಸ್ತಾವನೆ:**

ದಿ ಕಾವೇರಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ನಿ, ಗಿರಿನಗರ, ಬೆಂಗಳೂರು ಇದು ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ 1949ರ ಕಲಂ 11(1), 22(3)(ಎ), 22(3)(ಬಿ), 18 ಮತ್ತು 24ನ್ನು ಪಾಲನೆ ಮಾಡುವಲ್ಲಿ ವಿಫಲವಾಗಿದ್ದು ಋಣಗಳನ್ನು (Debts) ತೀರಿಸಲು ಅಸಮರ್ಥವಾಗಿದೆ ಎಂಬುದಾಗಿ ಉಲ್ಲೇಖ(2)ರ ಪತ್ರದಲ್ಲಿ ಭಾರತೀಯ ರಿಸರ್ವ್‌ಬ್ಯಾಂಕ್ ಮುಂಬೈ, ತಿಳಿಸಿದ್ದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72-ಎ ರಡಿಯಲ್ಲಿ ಸಮಾಪನೆಗೊಳಿಸಲು ಸೂಚಿಸಿದೆ ಈ ಕಾರಣದಿಂದ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72-ಎ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರದನ್ವಯ ಕೆ. ನಾರಾಯಣಸ್ವಾಮಿ ಸಹಕಾರ ಸಂಘಗಳ ಜಂಟಿ ನಿಬಂಧಕರು, (ಪಟ್ಟಣ ಬ್ಯಾಂಕುಗಳ ವಿಭಾಗ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು ಆದ ನಾನು ದಿ ಕಾವೇರಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ನಿ, ಬೆಂಗಳೂರು ಇದನ್ನು ಸಮಾಪನೆಗೊಳಿಸಿ ಸಮಾಪಕರನ್ನಾಗಿ, ಶ್ರೀ ಅಶ್ವಥಯ್ಯ, ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇವರನ್ನು ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಿರುತ್ತೇನೆ.

ಸಮಾಪಕರು ಕೂಡಲೇ ಬ್ಯಾಂಕಿನ ಪ್ರಭಾರ ವಹಿಸಿಕೊಂಡು ಈ ಕಛೇರಿಗೆ ವರದಿ ಮಾಡುವುದು.

ಸಮಾಪಕರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಈ ಕಛೇರಿಯ ನಿರ್ದೇಶನ. ಸುತ್ತೋಲೆಗಳಿಗನುಸಾರವಾಗಿ ಬ್ಯಾಂಕಿನ ಆಸ್ತಿ-ಜವಾಬ್ದಾರಿಗಳ ವಿಲೇವಾರಿಗೆ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 5.8.2004 ರಂದು ಹೊರಡಿಸಲಾಗಿದೆ.

**ಕೆ. ನಾರಾಯಣಸ್ವಾಮಿ**

ಪಿ.ಆರ್.1155

ಸಹಕಾರ ಸಂಘಗಳ ಜಂಟಿ ನಿಬಂಧಕರು,
(ಪಟ್ಟಣ ಬ್ಯಾಂಕುಗಳ ವಿಭಾಗ).

## ಜಿಲ್ಲಾ ದಂಡಾಧಿಕಾರಿಗಳವರ ಕಾರ್ಯಾಲಯ ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

### ನಂ. ಎಂಎಜಿ 3 ಎಂಎಸ್‌ಸಿ:180/2001-02 ದಿನಾಂಕ: 2ನೇ ಆಗಸ್ಟ್ 2004

**ವಿಷಯ :** ಕೋಲಾರ ಜಿಲ್ಲೆಯಲ್ಲಿರುವ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವಾಹನ ನಿಲ್ದಾಣಗಳ ಸುತ್ತಮುತ್ತ 200 ಮೀಟರ್ಸ್ ವ್ಯಾಪ್ತಿಯಲ್ಲಿ ಖಾಸಗಿ ಸಾರಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸುವ ಕುರಿತು.

**ಉಲ್ಲೇಖ :**
1. ವಿಭಾಗೀಯ ನಿಯಂತ್ರಣಾಧಿಕಾರಿಗಳು ಕರ್ನಾಟಕ ರಾಜ್ಯರಸ್ತೆ ಸಾರಿಗೆ ಸಂಸ್ಥೆ ಕೋಲಾರ ವಿಭಾಗ ಕೋಲಾರ ರವರ ಪತ್ರ ನಂ. ಕರಾಸ:ಕೋವಿ:ಸಂಚಾರ:ನೋತೆ 2962:2001-02 ದಿನಾಂಕ: 5.12.2001.
2. ಪೊಲೀಸ್ ಅಧೀಕ್ಷಕರು ಕೋಲಾರ ರವರ ಪತ್ರ ನಂ. ಅಪರಾಧ (2) 143: 2001 ದಿನಾಂಕ: 22.12.2001.
3. ಪೊಲೀಸ್ ಅಧೀಕ್ಷಕರು ಕೆ.ಜಿ.ಎಫ್ ರವರ ಪತ್ರ ನಂ. ಸಿಆರ್‌ಎಂ 64:2002 ದಿನಾಂಕ: 29.6.2002.

ವಿಭಾಗೀಯ ನಿಯಂತ್ರಣಾಧಿಕಾರಿಗಳು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಕೋಲಾರ ವಿಭಾಗ ಕೋಲಾರ ರವರು ಮೇಲಿನ ಉಲ್ಲೇಖ (1)ರ ಪತ್ರದಲ್ಲಿ ಜಿಲ್ಲೆಯಲ್ಲಿನ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವಾಹನ ನಿಲ್ದಾಣಗಳಾದ ಕೋಲಾರ, ಚಿಂತಾಮಣಿ, ಚಿಕ್ಕಬಳ್ಳಾಪುರ, ಗೌರಿಬಿದನೂರು, ಶಿಡ್ಲಘಟ್ಟ, ಶ್ರೀನಿವಾಸಪುರ, ಬಾಗೇಪಲ್ಲಿ ಹಾಗೂ ಕೆ.ಜಿ.ಎಫ್. ಗಳಲ್ಲಿನ ವಾಹನ ನಿಲ್ದಾಣಗಳ ಸುತ್ತಮುತ್ತ 200 ಮೀಟರ್ಸ್ ವ್ಯಾಪ್ತಿಯಲ್ಲಿ ಖಾಸಗಿ ಸಾರಿಗೆ ವಾಹನಗಳನ್ನು ನಿಲ್ಲಿಸುವುದನ್ನು ನಿಷೇಧಿಸಿ ಅಧಿಸೂಚನೆಯನ್ನು ಹೊರಡಿಸಲು ಕೋರಿರುತ್ತಾರೆ.

ಈ ಸಂಬಂಧದಲ್ಲಿ ಪೋಲಿಸ್ ಅಧೀಕ್ಷಕರು ಕೋಲಾರ ಮತ್ತು ಕೆ.ಜಿ.ಎಫ್ ರವರನ್ನು ಅಭಿಪ್ರಾಯ ಕೇಳಲಾಗಿ ತಮ್ಮ ಅಭ್ಯಂತರವೇನೂ ಇಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

ಪ್ರಯುಕ್ತ ಪೋಲಿಸ್ ಕಾಯ್ದೆ 1963ರ ಕಲಂ 31 (1) (ಬಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಎಸ್. ರಾಮಪ್ರಸಾದ್, ಜಿಲ್ಲಾ ದಂಡಾಧಿಕಾರಿ, ಕೋಲಾರ ಜಿಲ್ಲೆ ಆದ ನಾನು ಕೋಲಾರ ಜಿಲ್ಲೆಯಲ್ಲಿನ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವಾಹನ ನಿಲ್ದಾಣಗಳ ಸುತ್ತಮುತ್ತ ಅಂದರೆ ಕೋಲಾರ, ಚಿಂತಾಮಣಿ, ಚಿಕ್ಕಬಳ್ಳಾಪುರ, ಗೌರಿಬಿದನೂರು, ಶಿಡ್ಲಘಟ್ಟ, ಶ್ರೀನಿವಾಸಪುರ, ಬಾಗೇಪಲ್ಲಿ ಹಾಗೂ ಕೆ.ಜಿ.ಎಫ್. ಗಳಲ್ಲಿನ ವಾಹನ ನಿಲ್ದಾಣಗಳ ಸುತ್ತಮುತ್ತ ಎರಡು ನೂರು ಮೀಟರ್ಸ್ ವ್ಯಾಪ್ತಿಯವರೆಗೆ ಪ್ರಯಾಣಿಕರ ಖಾಸಗಿ ಸಾರಿಗೆ ವಾಹನಗಳಾದ ಬಸ್, ಮೆಟಡಾರ್, ಕಾರು, ಟ್ಯಾಕ್ಸಿ ಮತ್ತು ಇತರೆ ವಾಹನಗಳ ನಿಲುಗಡೆಯನ್ನು ಪೂರ್ಣವಾಗಿ ನಿಷೇಧಿಸಿದೆ.

ಈ ಆದೇಶವು ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ ಮುಂದಿನ ಆದೇಶವಾಗುವವರೆಗೆ ಜಾರಿಯಲ್ಲಿರುತ್ತದೆ.

ನನ್ನ ಸ್ವಹಸ್ತದಿಂದ ಮೊಹರಿನೊಂದಿಗೆ 2004ನೇ ಆಗಸ್ಟ್ ಮಾಹೆ ದಿನಾಂಕ: 02 ರಂದು (2.08.2004) ಹೊರಡಿಸಲಾಗಿದೆ.

**ಬಿ. ಎಸ್. ರಾಮಪ್ರಸಾದ್**

ಪಿ.ಆರ್.1157

ಜಿಲ್ಲಾ ದಂಡಾಧಿಕಾರಿಗಳು, ಕೋಲಾರ ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು.

### ಅಧಿಕೃತ ಜ್ಞಾಪನ ಪತ್ರ

### ನಂ. ಎಲ್‌ಆರ್‌ಎಫ್:ಸಿಆರ್:100/2003-04 ದಿನಾಂಕ: 30ನೇ ಜುಲೈ 2004

**ವಿಷಯ :** ದಿ ಪಾಲ್ ಸರ್ವೀಸ್ ಸೊಸೈಟಿ, ಭೈರೋಹಳ್ಳಿ ರಸ್ತೆ, ಹೊಸಪಾಳ್ಯ ಭೀಮನಕುಪ್ಪೆ ಗ್ರಾಮ, ಕುಂಬಳಗೋಡು ಪೋಸ್ಟ್, ಬೆಂಗಳೂರು-57 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ ಭೀಮನಕುಪ್ಪೆ ಗ್ರಾಮದ ಸ.ನಂ.61 ರಲ್ಲಿ 6-01 ಎಕರೆ ಮತ್ತು 62 ರಲ್ಲಿ 4-31 ಎಕರೆ ಒಟ್ಟು 10-32 (ಹತ್ತು ಎಕರೆ ಮೂವತ್ತೆರಡು ಗುಂಟೆ) ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ/47/ಶಾಸನ/2001/ ಬೆಂಗಳೂರು ದಿನಾಂಕ: 23.4.2003.
2. ದಿ ಪಾಲ್ ಸರ್ವೀಸ್ ಸೊಸೈಟಿ, ಭೈರೋಹಳ್ಳಿ ರಸ್ತೆ, ಹೊಸಪಾಳ್ಯ ಭೀಮನಕುಪ್ಪೆ ಗ್ರಾಮ, ಕುಂಬಳಗೋಡು ಪೋಸ್ಟ್, ಬೆಂಗಳೂರು-57 ರವರ ಮನವಿ ದಿನಾಂಕ: 11.10.2003 ಮತ್ತು 27.07.2004.

3. ಬೆಂಗಳೂರು ದಕ್ಷಿಣ ತಾಲ್ಲೂಕು, ರವರ ಪತ್ರದ ನಂ:ಎಲ್‌ಆರ್‌ಎಫ್: ಸಿಆರ್ (109) 16/2004-05 ದಿನಾಂಕ: 09.07.2004.

ದಿ ಪಾಲ್ ಸರ್ವಿಸ್ ಸೊಸೈಟಿ, ಭೈರೋಹಳ್ಳಿ ರಸ್ತೆ, ಹೊಸಪಾಳ್ಯ ಭೀಮನಕುಪ್ಪೆ ಗ್ರಾಮ, ಕುಂಬಳಗೋಡು ಪೋಸ್ಟ್, ಬೆಂಗಳೂರು-57 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ.61 ರಲ್ಲಿ 6-01 ಎಕರೆ ಮತ್ತು 62 ರಲ್ಲಿ 4-31 ಎಕರೆ ಒಟ್ಟು 10-32 (ಹತ್ತು ಎಕರೆ ಮೂವತ್ತೆರಡು ಗುಂಟೆ) ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ರವರ ಪತ್ರದ ನಂ. ಎಲ್‌ಆರ್‌ಎಫ್ ಸಿಆರ್ (109) 16/2004-05 ದಿನಾಂಕ: 09.07.2004 ರಲ್ಲಿ ಪ್ರಸ್ತಾಪಿತ ಗ್ರಾಮಗಳು ಮೇಲ್ಕಂಡ ಸ.ನಂ. 61 ರಲ್ಲಿ 6-01 ಎಕರೆ ಮತ್ತು 62 ರಲ್ಲಿ 4-31 ಎಕರೆ ಒಟ್ಟು 10-32 (ಹತ್ತು ಎಕರೆ ಮೂವತ್ತೆರಡು ಗುಂಟೆ) ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ, ಕೆಂಗೇರಿ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 28.05.1992 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ.61 ರಲ್ಲಿ 6-01 ಎಕರೆ ಮತ್ತು 62 ರಲ್ಲಿ 4-31 ಎಕರೆ ಒಟ್ಟು 10-32 (ಹತ್ತು ಎಕರೆ ಮೂವತ್ತೆರಡು ಗುಂಟೆ) ಎಕರೆ ಜಮೀನನ್ನು ದಿ ಪಾಲ್ ಸರ್ವಿಸ್ ಸೊಸೈಟಿ, ಭೈರೋಹಳ್ಳಿ ರಸ್ತೆ, ಹೊಸಪಾಳ್ಯ ಭೀಮನಕುಪ್ಪೆ ಗ್ರಾಮ, ಕುಂಬಳಗೋಡು ಪೋಸ್ಟ್, ಬೆಂಗಳೂರು-57 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1158

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರ ಕಛೇರಿಯ ನಡವಳಿಕೆಗಳು.

**ವಿಷಯ :** ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960 ನಿಯಮ 38 (7) ರ ಮೇರೆಗೆ ನೀಡಲಾದ ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶ ಪತ್ರ ನೀಡುವ ಕುರಿತು.

**ಉಲ್ಲೇಖ :**
1. ಮೂಲ ದಾವಾ ಸಂಖ್ಯೆ: 43: 2003-04 ರ ತೀರ್ಪನ್ನು ಗಮನಿಸಿದೆ. ತೀರ್ಪು ದಿನಾಂಕ: 8.7.2003.
2. ಅಮಲ್ಜಾರಿ ಪ್ರಕರಣ ಸಂಖ್ಯೆ: 101: 2003-04 ದಿನಾಂಕ: 7.1.04.
3. ಮಾರಾಟಾಧಿಕಾರಿಗಳು ಮತ್ತು ಮೇನೇಜರ್ ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ ಇವರ ಪ್ರಸ್ತಾವನೆ ಪತ್ರ ಸಂಖ್ಯೆ: 91: 2004-05 ದಿನಾಂಕ: 14.05.04 ಮತ್ತು 19.07.2004.

ಶ್ರೀ ಎ. ಕೆ. ರಾಮಪ್ಪ ಬಿನ್ ಹುಚ್ಚಪ್ಪ, ಆನವಟ್ಟಿ ರಸ್ತೆ, ಶಿರಾಳಕೊಪ್ಪ ಇವರು ವ್ಯಾಪಾರದಿಂದ ಜೀವನ ಮಾಡುತ್ತಿದ್ದು, ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ ಇವರಲ್ಲಿ ಸದಸ್ಯತ್ವ ಪಡೆದು, ವ್ಯಾಪಾರದ ಸಲುವಾಗಿ ದಿನಾಂಕ: 27.06.98 ರಲ್ಲಿ ರೂ. 30000-00 ಗಳನ್ನು ಸಾಲವಾಗಿ ಪಡೆದಿರುತ್ತಾರೆ. ಈ ಸಾಲಕ್ಕೆ ಸಂಬಂಧಿಸಿದಂತೆ ತಮಗೆ ಸೇರಿದ ಸ್ಥಿರಾಸ್ತಿಯನ್ನು ಅಂದರೆ ಶಿರಾಳಕೊಪ್ಪ ಪಟ್ಟಣ ಪಂಚಾಯಿತಿ ಆನವಟ್ಟಿ ರಸ್ತೆಯಲ್ಲಿರುವ ಖಾತೆ ನಂಬರ್ 192 ಅಸೆಸ್‌ಮೆಂಟ್ ನಂಬರ್ 251, ಅಳತೆ 15ಅಡಿx35ಅಡಿ ನಿವೇಶನ ಇದರಲ್ಲಿ ಇರುವ 10 ಅಡಿx15 ಅಡಿ ಅಳತೆಯ ಕೆಂಪು ಹೆಂಚಿನ ಮನೆ ಮತ್ತು ನಿವೇಶನ ಸಹಿತ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ಕಂಟಿನ್ಯೂಯಿಂಗ್ ಮಾರ್ಟಿಗೇಜ್ ಬಾಂಡ್ ಮೂಲಕ ಆಧಾರ ಮಾಡಿಕೊಟ್ಟಿರುತ್ತಾರೆ. ಸ್ಥಿರಾಸ್ತಿ ಬ್ಯಾಂಕಿಗೆ ಆಧಾರ ಮಾಡಿದ ಬಗ್ಗೆ ದಿನಾಂಕ: 28.7.1998 ರಂದು ಉಪನೋಂದಣಿ ಅಧಿಕಾರಿಗಳು, ಶಿಕಾರಿಪುರ ಇವರಲ್ಲಿ ನೊಂದಾಯಿಸಲಾಗಿದೆ.

ದಿನಾಂಕ: 27.6.1998ರಲ್ಲಿ ಪಡೆದ ಸಾಲವನ್ನು ಪುನ: 27.01.01 ರಲ್ಲಿ ನವೀಕರಣ ಮಾಡಿಕೊಳ್ಳಲಾಗಿದೆ. ಹೀಗೆ ತಾವು ಪಡೆದುಕೊಂಡ ಸಾಲವನ್ನು, ಬ್ಯಾಂಕಿನ ಷರತ್ತು ಮತ್ತು ಕರಾರುಗಳಿಗೆ ಹಾಗೂ ನಿಗದಿತ ಅವಧಿಯೊಳಗಾಗಿ ಅಸಲು ಮತ್ತು ಬಡ್ಡಿಸಹಿತ ಮರುಪಾವತಿಸುವುದಾಗಿ ಒಪ್ಪಿ ಬ್ಯಾಂಕಿನ ದಾಖಲಾತಿಗಳಿಗೆ ಸಹಿ ಮಾಡಿರುತ್ತಾರೆ. ಶ್ರೀ ಎ. ಕೆ. ರಾಮಪ್ಪ ಇವರು ತಾವು ಪಡೆದುಕೊಂಡ ಸಾಲವನ್ನು ನಿಗದಿತ ಅವಧಿಯೊಳಗಾಗಿ ಕಾಲಕಾಲಕ್ಕೆ ಅಸಲು ಕಂತು ಮತ್ತು ಬಡ್ಡಿಯನ್ನು ಬ್ಯಾಂಕಿಗೆ ಪಾವತಿಸದೇ ಇದ್ದ ಪ್ರಯುಕ್ತ ಬ್ಯಾಂಕಿನವರು ಸಾಲ ಮರುಪಾವತಿಸಲು ತಿಳುವಳಿಕೆ ನೋಟಿಸ್‌ನ್ನು ನೀಡಿದರೂ ಸಹ ಸಾಲ ವಸೂಲು ಆಗದೇ ಇದ್ದ ಪ್ರಯುಕ್ತ ಬ್ಯಾಂಕಿನ ಕಾರ್ಯದರ್ಶಿಯವರು ಸಂಬಂಧಿಸಿದವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 70 ರಡಿಯಲ್ಲಿ ಈ ನ್ಯಾಯಾಲಯದಲ್ಲಿ (ಕಛೇರಿಯಲ್ಲಿ) ದಾವಾ ದಾಖಲು ಮಾಡಿರುತ್ತಾರೆ. ದಾವಾ ಸಂಖ್ಯೆ: 43:2003-04 ತೀರ್ಪು ದಿನಾಂಕ: 8.7.2003 ಇದ್ದು ತೀರ್ಪಿನ (ಡಿಕ್ರಿಯ) ಪ್ರತಿಯನ್ನು ಅರ್ಜಿದಾರರು ಪಡೆದುಕೊಂಡಿರುತ್ತಾರೆ.

ಡಿಕ್ರಿಯನ್ನು ಪಡೆದ ನಂತರವೂ ಸಹಾ ಡಿಕ್ರಿದಾರರು, ಎಷ್ಟೇ ತಗಾದೆ ಮಾಡಿದರೂ ಸಹಾ ಡಿಕ್ರಿ ಬಾಕಿದಾರರು, ಡಿಕ್ರಿ ಮೊಬಲಗನ್ನು ಅರ್ಜಿದಾರರ ಬ್ಯಾಂಕಿಗೆ ಮರು ಪಾವತಿಸದೇ ಇದ್ದ ಕಾರಣ ಮುಂದಿನ ಕಾನೂನು ಕ್ರಮ ಜರುಗಿಸಲು ಬ್ಯಾಂಕಿನ ಕಾರ್ಯದರ್ಶಿಯವರು ದಿನಾಂಕ: 2.01.04 ರಂದು ಅಮಲ್ಜಾರಿ ಅರ್ಜಿಯನ್ನು ತಯಾರಿಸಿ, ದಾಖಲಾತಿ ಸಲುವಾಗಿ ಈ ಕಛೇರಿಗೆ ಸಲ್ಲಿಸಿರುವರು. ಸದರಿ ಅಮಲ್ಜಾರಿ ಕಡತವನ್ನು ಪರಿಶೀಲಿಸಿ, ಈ ಕಛೇರಿಯಲ್ಲಿ ದಾಖಲಿಸಿಕೊಂಡು ಮುಂದಿನ ಕಾನೂನು ಕ್ರಮ ಜರುಗಿಸಲು ಮೇನೇಜರ್ ಹಾಗೂ ಮಾರಾಟಾಧಿಕಾರಿಗಳು ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ ಇವರಿಗೆ ವಹಿಸಿಕೊಡಲಾಗಿದೆ.

ಮಾರಾಟಾಧಿಕಾರಿಗಳು ಡಿಕ್ರಿಬಾಕಿದಾರರಿಗೆ ಫಾರಂ ನಂ. 2 ಮತ್ತು 6ನ್ನು ಜಾರಿ ಮಾಡಿಸಿರುತ್ತಾರೆ. ಫಾರಂ. 6 ಜಾರಿಯಾದ ನಂತರ ಶ್ರೀ ಎ. ಕೆ. ರಾಮಪ್ಪ ಮತ್ತು ಅವರ ಕುಟುಂಬದವರು ಮಾರಾಟಾಧಿಕಾರಿಗಳಿಗೆ ದಿನಾಂಕ: 28.01.04 ರಂದು ಒಂದು ಪತ್ರವನ್ನು ನೀಡಿ ತಾವು ಪಡೆದುಕೊಂಡ ಸಾಲವನ್ನು ಮರುಪಾವತಿಸಲು ತೊಂದರೆ ಇರುವುದಾಗಿ ತಾವು ಸಾಲ ಪಡೆಯುವಾಗ ಬ್ಯಾಂಕಿಗೆ ಆಧಾರ ಮಾಡಿಕೊಟ್ಟಿರುವ ತಮ್ಮ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ, ಬ್ಯಾಂಕಿನ ಸಾಲವನ್ನು ತೀರುವಳಿ ಮಾಡಿಕೊಂಡು ಉಳಿದ ಮೊಬಲಗನ್ನು ತಮಗೆ ವಾಪಾಸು ನೀಡುವಂತೆ ಒಪ್ಪಿಗೆ ಪತ್ರ ಬರೆದುಕೊಟ್ಟು ತಾವು ಮತ್ತು ಅವರ ಹೆಂಡತಿ ಸಹಿತ ಸಹಿ ಮಾಡಿರುತ್ತಾರೆ.

ಆದ್ದರಿಂದ ಮಾರಾಟಾಧಿಕಾರಿಗಳು ಈ ಪ್ರಕರಣದಲ್ಲಿ ಕಾನೂನು ಕ್ರಮ ಜರುಗಿಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿಗೆ ಗುರಿಪಡಿಸಲು ದಿನಾಂಕ: 11.2.04 ರಂದು ಹರಾಜು ದಿನಾಂಕ ನಿಗದಿಪಡಿಸಿಕೊಡುವಂತೆ ಕೋರಿ ಈ ಕಛೇರಿಗೆ ಅಮಲ್ಜಾರಿ ಕಡತವನ್ನು ಸಲ್ಲಿಸಿರುತ್ತಾರೆ. ಸದರಿ ಕಡತವನ್ನು ಪರಿಶೀಲಿಸಿ, ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ: 25.03.2004 ರಂದು ಬೆಳಿಗ್ಗೆ 10.00 ಘಂಟೆಗೆ ಬಹಿರಂಗ ಹರಾಜು ನಡೆಸಲು ಫಾರಂ ನಂ. 8 ಮತ್ತು 9 ಗಳಿಗೆ ದಿನಾಂಕ: 12.2.04 ರಂದು ಸಹಿ ಮಾಡಿಕೊಡಲಾಗಿದೆ. ನಮೂನೆ 8 ಮತ್ತು 9ಗಳನ್ನು ಸಂಬಂಧಿಸಿದ ಕಛೇರಿಗಳಿಗೆ ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 125 ಮತ್ತು ನಿಯಮಗಳು 1960 ನಿಯಮ 32ರ ಮೇರೆಗೆ ಡಿಕ್ರಿ ಬಾಕಿದಾರರಿಗೆ ಜಾರಿ ಮಾಡುವಲ್ಲಿ ಕ್ರಮಕೈಗೊಳ್ಳಲಾಗಿದೆ. ಹಾಗೂ ಜಾರಿ ಕ್ರಮ ಬದ್ಧವಾಗಿರುತ್ತದೆ.

ದಿನಾಂಕ: 25.03.2004 ರಂದು ಡಿಕ್ರಿ ಬಾಕಿದಾರರ ಸ್ಥಿರಾಸ್ತಿ ಹರಾಜು ಮಾಡಲು ಮಾರಾಟಾಧಿಕಾರಿಗಳು ಹರಾಜು ಕ್ರಮ ಕೈಗೊಂಡಿರುತ್ತಾರೆ. ದಿನಾಂಕ: 25.03.2004 ರಂದು ಬಿಡ್ಡುದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಹರಾಜನ್ನು ದಿನಾಂಕ: 03.04.04ಕ್ಕೆ ಮುಂದೂಡಲಾಗಿದೆ. ಈ ಬಗ್ಗೆ ಡಿಕ್ರಿ ಬಾಕಿದಾರರಿಗೆ ತಿಳಿಸಲಾಗಿದೆ. ಸದ್ರಿ ತಿಳುವಳಿಕೆ ತಲುಪಿದ ಬಗ್ಗೆ ಡಿಕ್ರಿ ಬಾಕಿದಾರರು ತಿಳುವಳಿಕೆ ಪತ್ರಕ್ಕೆ ದಿನಾಂಕ: 25.03.2004 ರಂದು ಸಹಿ ಮಾಡಿರುತ್ತಾರೆ. ಪುನಃ ದಿನಾಂಕ: 03.04.04ರ ಹರಾಜು ಪೂರ್ವದಲ್ಲಿ ಕಾನೂನು ರೀತ್ಯಾ ಟಾಂ ಟಾಂ ಹೊಡೆಸಿ ಪ್ರಚಾರಪಡಿಸಲಾಗಿದೆ.

ದಿನಾಂಕ: 3.4.2004 ರಂದು ಮಾರಾಟಾಧಿಕಾರಿಗಳು ಹರಾಜು ಕ್ರಮ ಕೈಗೊಂಡಿರುತ್ತಾರೆ. ಅಂದಿನ ಹರಾಜು ಪ್ರಕ್ರಿಯೆಯಲ್ಲಿ 9 ಜನ ಬಿಡ್ಡುದಾರರು ಮತ್ತು 7 ಜನ ನಾಗರೀಕರು (ಸಾಕ್ಷಿಗಳು) ಹಾಜರಾಗಿರುತ್ತಾರೆ. ಶ್ರೀ ಮಲ್ಲಿಕಾರ್ಜುನಯ್ಯ ಬಿನ್ ಬಸಯ್ಯ ಬೆಳಗಾವಿ ಗ್ರಾಮ ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿ ರೂ. 74000-00 ಗಳಿಗೆ ಸದ್ರಿ ಸ್ಥಿರಾಸ್ತಿಯನ್ನು ಬಿಡ್ಡು ಮಾಡಿರುತ್ತಾರೆ. ಮಾರಾಟಾಧಿಕಾರಿಗಳು ಅವರ ಹೆಸರಿಗೆ ಬಿಡ್ಡನ್ನು (ಸವಾಲನ್ನು) ನಿಲ್ಲಿಸಿರುತ್ತಾರೆ. ನಂತರದಲ್ಲಿ ಕಾನೂನು ರೀತ್ಯಾ ಎಲ್ಲಾ ಪ್ರಕ್ರಿಯೆ ಮುಗಿದ ನಂತರ ಶ್ರೀ ಮಲ್ಲಿಕಾರ್ಜುನಯ್ಯ ಬಿನ್ ಬಸಯ್ಯ, ಬೆಳಗಾವಿ ಇವರ ಹೆಸರಿಗೆ ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಪತ್ರವನ್ನು ನೀಡಲು ಉಲ್ಲೇಖ (3)ರ ಪತ್ರದ ಮೂಲಕ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (3)ರ ಪತ್ರದ ಮೂಲಕ ಬಂದಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಹಾಗೂ ಈ ಕೆಳಕಂಡಂತೆ ಮಾರಾಟ ಸ್ಥಿರೀಕರಣ ಆದೇಶ ನೀಡಿದೆ.

## ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶ

## ಕ್ರ.ಸಂ. ಸಸಂಸನಿ-25:ಅಮಲ್ಜಾರಿ:ಮಾಸ್ಥಿಆ:ಸಿಆರ್-16:04-05 ದಿನಾಂಕ: 23ನೇ ಜುಲೈ 2004

ಜಿ. ವಿ. ಬಸವರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960 ನಿಯಮ 38(7)ರ ಮೇರೆಗೆ ದತ್ತವಾದ ಹಾಗೂ ಕರ್ನಾಟಕ ರಾಜ್ಯ ಸರ್ಕಾರ, ಸಹಕಾರ ಇಲಾಖೆ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ: 2001 ಬೆಂಗಳೂರು ದಿನಾಂಕ: 21.11.2001ರ ಮೇರೆಗೆ ನೀಡಲಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಶಿರಾಳಕೊಪ್ಪ ಪಟ್ಟಣ ಪಂಚಾಯಿತಿ ವ್ಯಾಪ್ತಿಯ ಅನವಟ್ಟಿ ರಸ್ತೆಯಲ್ಲಿ ಬರುವ ಖಾತೆ ನಂಬರ್ 192 ಅಸೆಸ್‌ಮೆಂಟ್ ನಂಬರ್ 251 ಅಳತೆ 15 ಅಡಿ x 35 ಅಡಿ ನಿವೇಶನ ಇದರಲ್ಲಿ ಇರುವ 10 ಅಡಿ x 15 ಅಡಿ ಅಳತೆಯ ಕೆಂಪು ಹೆಂಚಿನ ಮನೆ ಮತ್ತು ಉಳಿದ ನಿವೇಶನ ಸಹಿತ ಇದಕ್ಕೆ ಚಕ್ಕುಬಂದಿ ಪೂರ್ವಕ್ಕೆ ಶ್ರೀ ರಾಮಪ್ಪ ಎ. ಕೆ. ಇವರ ಜಮೀನು, ಪಶ್ಚಿಮಕ್ಕೆ ಆನವಟ್ಟಿ ರಸ್ತೆ, ಉತ್ತರಕ್ಕೆ ಶ್ರೀ ಮಂಚಿ ಮಾರುತೆಪ್ಪ ಇವರ ಜಮೀನು, ದಕ್ಷಿಣಕ್ಕೆ ಕಾನಳ್ಳಿ ವೀರಭದ್ರಪ್ಪ ಇವರ ಖಾಲಿಜಾಗ, ಈ ಮಧ್ಯದಲ್ಲಿರುವ ಸ್ಥಿರಾಸ್ತಿಯನ್ನು ಡಿಕ್ರಿದಾರರಾದ ಕಾರ್ಯದರ್ಶಿ, ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು ಇವರು ಡಿಕ್ರಿ ಬಾಕಿದಾರರಿಂದ ಬರಬೇಕಾದ ಡಿಕ್ರಿ ಮೊಬಲಗಿಗೆ ದಿನಾಂಕ: 03.04.04 ರಂದು ಮಾರಾಟಾಧಿಕಾರಿಗಳ ಮೂಲಕ ಬಹಿರಂಗ ಹರಾಜು ಮಾಡಿಸಿದ್ದು ಬಹಿರಂಗ ಹರಾಜಿನಲ್ಲಿ ಶ್ರೀ ಮಲ್ಲಿಕಾರ್ಜುನಯ್ಯ ಬಿನ್ ಬಸಯ್ಯ ಬೆಳಗಾವಿ ಗ್ರಾಮ, ಶಿರಾಳಕೊಪ್ಪ ಇವರು ಅತೀ ಹೆಚ್ಚಿನ ಬಿಡ್ಡು ಮೊಬಲಗು ಕೂಗಿರುವುದರಿಂದ ಸದ್ರಿಯವರ ಹೆಸರಿಗೆ ಮಾರಾಟ ಸ್ಥಿರೀಕರಣ ಆದೇಶ ಪತ್ರವನ್ನು ನೀಡಿರುತ್ತೇನೆ. ಮಾರಾಟದ ಮೊಬಲಗು ರೂ. 74000-00 ಗಳು ಇರುತ್ತದೆ. ಮತ್ತು ಈ ಆದೇಶಕ್ಕೆ ಲಗತ್ತಿಸಿರುವ ನಿಗದಿತ ನಮೂನೆ 10 ಮತ್ತು 11ನ್ನು ಈ ಸ್ಥಿರೀಕರಣ ಆದೇಶದ ಒಂದು ಮುಖ್ಯ ಭಾಗವಾಗಿರುತ್ತದೆ.

ಛಾಪಾ ಕಾಗದ ಖರೀದಿಸಿ ಲಗತ್ತಿಸುವ ಕುರಿತಂತೆ ಮಾನ್ಯ ಕರ್ನಾಟಕ ಸರ್ಕಾರ ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆಯ ನೋಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಬೆಂಗಳೂರು ಇವರು ಹೊರಡಿಸಿರುವ ಸುತ್ತೋಲೆ ಸಂಖ್ಯೆ: ಎಸ್‌ಡಿಸಿ:87:93-94 ದಿನಾಂಕ: 16.08.99 ರಲ್ಲಿರುವ ಸ್ಪಷ್ಟೀಕರಣದ ಅನ್ವಯ ಮತ್ತು ಕರ್ನಾಟಕ ನೋಂದಣಿ ಕಾಯ್ದೆ ಸಂಖ್ಯೆ: 09:2003 ದಿನಾಂಕ: 31.3.03 ರ ಪ್ರಕಾರ ಛಾಪಾ ಕಾಗದವನ್ನು ಪಡೆದಿರುವುದಿಲ್ಲ, ಹಾಗೂ ಅನ್ವಯವಾಗುವ ಶುಲ್ಕವನ್ನು ಸರ್ಕಾರಕ್ಕೆ ನೇರವಾಗಿ ತುಂಬಲು ಸೂಚಿಸಿದೆ.

ನನ್ನ ಸಹಿ ಮತ್ತು ಕಾರ್ಯಾಲಯದ ದುಂಡು ಮುದ್ರೆಯೊಂದಿಗೆ ದಿನಾಂಕ: 23.07.2004 ರಂದು ಈ ಆದೇಶ ನೀಡಿರುತ್ತೇನೆ.

**ಜಿ. ವಿ. ಬಸವರಾಜು**

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಹಾಗೂ ವಸೂಲಾತಿ ಅಧಿಕಾರಿಗಳು, ಸಾಗರ ಉಪವಿಭಾಗ, ಸಾಗರ.

## FORM No. 10

## CERTIFICATE OF SALE ISSUED UNDER SUB-RULE (7) OF THE RULES FRAMED UNDER THE KARNATAKA CO-OPERATIVE SOCIETIES ACT OF 1959

G. V. Basavaraju S/o Venkatappa

Assistant Registrar of Co-operative Socieities, Sagar Sub-Division, Sagar, Shimoga District.

Execution petition No. 101/2003-04, dated: 07.01.04.

| **Decree Holder** | **Vs/-** | **Defaulter** |
|---|---|---|
| Secretary Sri. Basaveswara Pattana Sahakara Bank Ltd, Shiralakoppa Shikaripura Taluk | | Sri. A. K. Ramappa S/o Huchappa |

This is to certify that Sri. Mallikarjunaiah S/o Basaiah, Belagavi, Shiralakoppa, Caste:- Jangama, religion Hindu, Cultivator (Profession) residing in the Village of Belagavi, Shiralakoppa of Shikaripura Taluk in the Shimoga District has purchased at Anavatti Road, Shiralakoppa, a public auction held by one of the sale officers of Sri Basaveswara pattana sahakara Bank Ltd Shiralakoppa District, Shimoga the undermentioned immovable property sold for arrears due to secretary Sri. Basaveswara Pattana Sahakara Bank Ltd, Shiralakoppa by Sri. A. K. Ramappa S/o Huchappa, Caste Adi Karnataka, religion Hindu, land holder (Profession) in the Village of Anavatti Road, Shiralakoppa of Shikaripura Taluk in Shimoga District in execution of decree/ award/decision/order No. 43/2003-04 dated: 08.07.2003 on the

file of A.R.C.S., Sagar Sub Division, Sagar and has paid the full amount of the purchase money, viz., Rs. 74,000/- and that the sale has been duly confirmed by me on 23rd day of July 2004.

Assistant Registrar of Co-operative Societies of
Sagar Sub Division Sagar.

**SCHEDULE OF PROPERTIES**

Registration District : Shimoga
Registration Sub District : Sagar
Taluk : Shikaripura
Village : Shiralakoppa

Description of properties (Boundaries)

East :- Sri. A.K. Ramappa's property
West :- Anavatti Road,
North :- Sri. Manchi Maruthappa's Property
South:- Sri, Kanalli Veerabhadrappa's site.

Khata No. 192, Assessment No. 251, measurement, 15 feet x 35 feet including 10 feet x 15 feet Mangalore tiles house.

Assessment :- Rs. 32-59.
Sale price :- Rs. 74,000/-
Date of Sale 03.04.2004.
Given under my hand and seal this 23rd day of July 2004.

Station :- Sagar,
Date:- 23.07.2004.

Assistant Registrar of Co-operative Societies
of Sagar Sub Division Sagar.

**ಫಾರಂ ನಂ. 11**

**38ನೆಯ ರೂಲಿನ (7)ನೆಯ ಕಾಲಂ**

**ಸ್ಥಿರಸೊತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಶಿವಮೊಗ್ಗ ಜಿಲ್ಲಾ ಶಿಕಾರಿಪುರ ತಾಲ್ಲೂಕು, ಶಿರಾಳಕೊಪ್ಪ ಗ್ರಾಮದಲ್ಲಿರುವ ಶ್ರೀ ಮಲ್ಲಿಕಾರ್ಜುನಯ್ಯ ಬಿನ್ ಬಸಯ್ಯ ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾದ ಹರಾಜಿನಲ್ಲಿ 2004ನೇ ಇಸವಿ ಏಪ್ರಿಲ್ ತಿಂಗಳ 3ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದರಾಗಿಯೂ ಮತ್ತು ದರಖಾಸ್ತು ಹಣ ರು. 74000-00 ಗಳನ್ನು ಸಂಪೂರ್ಣವಾಗಿ ಪಾವತಿಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರನ ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀ ಮಲ್ಲಿಕಾರ್ಜುನಯ್ಯ ಬಿನ್ ಬಸಯ್ಯ ಇವರು ಉತ್ತರಾಧಿಕಾರಿಯಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹ | ಗದ್ದೆಗಳ ವಿವರ | | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|
| | | ನಂ. ಪೋಡ್ ನಂ. | ಖಾತೆದಾರನ ಹೆಸರು | | |
| ಶಿರಾಳಕೊಪ್ಪ ಶಿಕಾರಿಪುರ | ಶಿರಾಳಕೊಪ್ಪ ಪಟ್ಟಣ ಪಂಚಾಯಿತಿ ವ್ಯಾಪ್ತಿಯ ಆನವಟ್ಟಿ ರಸ್ತೆಯಲ್ಲಿರುವ ಮಂಗಳೂರು ಹೆಂಚಿನ ಮನೆ ಮತ್ತು ನಿವೇಶನ. | ಖಾತೆ ನಂ. 192 ಅಸೆಸ್‌ಮೆಂಟ್ ನಂ. 251ರಲ್ಲಿರುವ 15 ಅಡಿx35 ಅಡಿ ನಿವೇಶನ ಮತ್ತು ಇದರಲ್ಲಿ ಇರುವ 10 ಅಡಿx 15 ಅಡಿ ವಿಸ್ತೀರ್ಣದ ಮಂಗಳೂರು ಹಂಚಿನಮನೆ | ಶ್ರೀ ಎ.ಕೆ.ರಾಮಪ್ಪ ಬಿನ್ ಹುಚ್ಚಪ್ಪ | -- | ಶ್ರೀ ಬಸವೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ನಿ, ಶಿರಾಳಕೊಪ್ಪ ಇವರಿಂದ ಪಡೆದ ಸಾಲದ ಸಂಬಂಧ ಡಿಕ್ರಿ ಮೊಬಲಗು ರೂ. 42804-00 + ಬಡ್ಡಿ, ಸುಸ್ತಿ ಬಡ್ಡಿ ಹಾಗೂ ಇತರೆ ವೆಚ್ಚಗಳ ಸಹಿತ ವಸೂಲಾತಿ ಸಂಬಂಧ ಎಡಗಡೆ ತೋರಿಸಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲಾಗಿದೆ. |

**ಜಿ. ವಿ. ಬಸವರಾಜು**

ಪಿ.ಆರ್.1159

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಹಾಗೂ ವಸೂಲಾತಿ ಅಧಿಕಾರಿಗಳು, ಸಾಗರ ಉಪವಿಭಾಗ, ಸಾಗರ.

**OFFICE OF THE COMMISSIONER OF COMMERCIAL TAXES, GANDHINAGAR, BANGALORE**

**NOTIFICATION**

**No. KSA:CR:09/04-05 Bangalore, dated: 31st July 2004**

In exercise of the powers conferred on me by Proviso (aaa) to sub-section (1) of Section 19AA of the KST Act, 1957 (Karnataka Act 25 of 1957), I Ashok Kumar. C. Manoli, Commissioner of Commercial Taxes, Karnataka, do hereby notify that departments of Government of Karnataka and Zilla Panchayats in the State shall not make deduction of tax at source as provided under section 19AA of the said Act from M/s. Komarla Feeds, Bangalore bearing KST RC. No. 7030434-8 borne on the files of Deputy Commissioner of Commercial Taxes (Assessment-32), City Division-III, Bangalore-9 from 01.08.2004 to 31.03.2005.

**ASHOK KUMAR C. MANOLI**

PR-1163

Commissioner of Commercial Taxes,
Karnataka, Bangalore.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**

**ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎಫ್‌ಓಸಿ:ಸಿಓಎನ್:ಸಿಆರ್:10/04-05 ದಿನಾಂಕ: 5ನೇ ಆಗಸ್ಟ್ 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಉಂಬ್ಲೆಬೈಲು ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | 407 ವ್ಯಾನು ನಂ: ಕೆಎ 13-3580 | ಆರಕ್ಷಕ ನಿರೀಕ್ಷಕರು, ತರೀಕೆರೆ ಪೋಲಿಸ್ ಠಾಣೆ ಇವರ ಮೊಕದ್ದಮೆ ಸಂ: 80/04 ಕಲಂ 379 ಐಪಿಸಿ ಜೊ 22 ಕೆಪಿಟಿ ಆಕ್ಟ್ ದಿನಾಂಕ: 26.6.04. | 497 SP 21 BUQ 716659 | 35701134 G 806116 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು

ಪಿ.ಆರ್. 1164

ಹಾಗೂ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,**

**ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂ: ಹಿಂವಅಇ:ಬೆಂಗ್ರಾ:ಬಿ3:ಸಿಆರ್-5:04-05 ದಿನಾಂಕ: 2ನೇ ಆಗಸ್ಟ್ 2004**

**ವಿಷಯ :** 2004-05ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯಿಂದ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ ಅರ್ಜಿಗಳನ್ನು ಕರೆಯುವ ಕುರಿತು.

**ಉಲ್ಲೇಖ :** 1. ಸರ್ಕಾರದ ಆದೇಶ ಸಂ: ಎಸ್‌ಡಬ್ಲ್ಯೂಎಲ್ 68 ಎಸ್‌ಇಡಬ್ಲ್ಯೂ 89, ದಿನಾಂಕ: 2.11.90

2. ಸರ್ಕಾರದ ಆದೇಶ ಸಂ: ಸಕಇ 205 ಬಿಎಂಎಸ್ 99, ದಿನಾಂಕ: 7.10.89.

2004-05ನೇ ಸಾಲಿನ ಬೆಂಗಳೂರು (ಗ್ರಾ) ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ದರು, ಸಿಖ್ಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ತರಬೇತಿ ಅವಧಿಯಲ್ಲಿ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಮತೀಯ ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು, ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀದಿ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 28.8.2004 ರೊಳಗೆ ಸಲ್ಲಿಸುವುದು.

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿ ಮುಗಿಸಿ 2 ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಸಿಖ್ಖರು, ಪಾರ್ಸಿ ಮತ್ತು ಬೌದ್ದರು ಇವುಗಳಿಗೆ ಸೇರಿರಬೇಕು. ಹಾಗೂ ಸರ್ಕಾರದಿಂದ ನಿಗದಿಪಡಿಸಲಾದ ಜಾತಿ ಆದಾಯ ಘೋಷಣಾ ಪತ್ರ ಹಾಗೂ ಪರಿಶೀಲನಾ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿ ಮಾಡಿ ಸಂಬಂಧಿಸಿದ ಅಧಿಕಾರಿಗಳ ದೃಢೀಕರಣದೊಂದಿಗೆ ಮೂಲ ಪ್ರಮಾಣ ಪತ್ರವನ್ನು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.

4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳು ಮೀರಿರಬಾರದು. ಆದರೆ ವರ್ಗ 1ರ ಅಭ್ಯರ್ಥಿಗಳಿಗೆ ಒಂದು ವರ್ಷದ ರಿಯಾಯ್ತಿ ಇದ್ದು, ಅವರುಗಳಿಗೆ 31 ವರ್ಷ ಮೀರಿರಬಾರದು.

5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ. 15,000-00 ಗಳಿಗೆ ಮೀರಿರಬಾರದು. ಆದರೆ ವರ್ಗ 1ರಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ: ರಾಜ್ಯ ಸರ್ಕಾರದ ಕೆಲಸ ಸಿಕ್ಕಿದ ಅಭ್ಯರ್ಥಿಗಳಿಗೆ ಈ ಬಗ್ಗೆ ರಿಯಾಯತಿ ಇರುತ್ತದೆ.

6) ಆಯ್ಕೆಯಾದ ಅಭ್ಯರ್ಥಿಗೆ ತರಬೇತಿಯ ಅವಧಿಯಲ್ಲಿ ತಿಂಗಳಿಗೆ 1,000-00 ರೂ.ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಆಯ್ಕೆ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್ಸ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದು ಕೊಡಬೇಕು.

9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟು ಹೋದಲ್ಲಿ, ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ಶೇ. 10ರ ಬಡ್ಡಿಯೊಂದಿಗೆ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀದಿ, ಬೆಂಗಳೂರು-1 ಇವರ ಕಛೇರಿಯ ವೇಳೆಯಲ್ಲಿ ಪಡೆಯುವುದು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಸಂದರ್ಶನದ ದಿನಾಂಕ ಹಾಗೂ ಸ್ಥಳಗಳನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕ ಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ. ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರದ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು,
ಹಾಗೂ ಜಿಲ್ಲಾ, ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ
ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 1165